Vol - 12 February 2014 Issue No. 02 ₹ 10.00/-







# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazin*

## 65ನೇ ಗಣರಾಜ್ಯೋತ್ಸವ ಕಾರ್ಯಕ್ರಮದಲ್ಲಿ ಸ್ಕೌಟ್-ಗೈಡ್‌ಗಳಿಗೆ, ಸೇವೆ ಸಲ್ಲಿಸಿದ ಹಿರಿಯರಿಗೆ ಜಿಲ್ಲಾ ಆಡಳಿತಗಳಿಂದ ಅಭಿನಂದನೆ, ಸಚಿವರುಗಳಿಂದ ಗೌರವ ವಂದನೆ ಸ್ವೀಕಾರ ಹಾಗೂ ಪ್ರಶಸ್ತಿ ಪತ್ರಗಳ ವಿತರಣೆ.



ಮಕೂರು ಜಿಲ್ಲಾ ಸಂಸ್ಥೆಯ ಪ್ರಿಯದರ್ಶಿನಿ ಮುಕ್ತದಳದ ಗೈಡ್ ಕುಮಾರಿ ಸೌಜನ್ಯ 012-13ರ "ರಾಷ್ಟ್ರಪತಿ ಪುರಸ್ಕಾರ" ಪಡೆದಿದ್ದಕ್ಕೆ ಜಿಲ್ಲಾಡಳಿತದಿಂದ ಮಾನ್ಯ ಕಾನೂನು ತ್ತು ಸಂಸದೀಯ ವ್ಯವಹಾರಗಳು ಹಾಗೂ ಪಶುಸಂಗೋಪನಾ ಇಲಾಖೆಗಳ ಚಿವರಾದ ಶ್ರೀ ಟಿ.ಬಿ. ಜಯಚಂದ್ರ ಅವರು ಪ್ರಶಸ್ತಿ ಪ್ರದಾನ ಮಾಡಿ ಗೌರವಿಸಿದರು. ತ್ರದಲ್ಲಿ ಶ್ರೀ ಡಿ. ಸತ್ಯಮೂರ್ತಿ, ಜಿಲ್ಲಾದಿಕಾರಿಗಳು, ಶ್ರೀ ಈಶ್ವರಯ್ಯ, ಪನಿರ್ದೇಶಕರು ಹಾಗೂ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳನ್ನು ಕಾಣಬಹುದು.



ಶ್ರೀ ಹೆಚ್.ಎಂ. ಗೌಡಯ್ಯ, ಕೇಂದ್ರ ಸ್ಥಾನಿಕ ಆಯುಕ್ತರು, ಹಾಸನ ಇವರನ್ನು ಸ್ಕೌಟಿಂಗ್‌ನಲ್ಲಿ ದೀರ್ಘ ಸೇವೆ ಸಲ್ಲಿಸಿದಕ್ಕೆ ಜಿಲ್ಲಾಡಳಿತದಿಂದ ಮಾನ್ಯ ಲೋಕೋಪಯೋಗಿ ಸಚಿವರಾದ ಡಾ. ಎಚ್.ಸಿ. ಮಾದೇವಪ್ಪನವರು ಗೌರವಿಸಿ ಸನ್ಮಾನಿಸದರು. ಮಾಜಿ ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಹೆಚ್.ಎಂ. ಶಿವಣ್ಣ ಹಾಗೂ ಇತರರು ಚಿತ್ರದಲ್ಲಿದ್ದಾರೆ.



ಜನವರಿ 2014ರಂದು ಬೆಳಗಾವಿ ಸಿ.ಪಿ.ಇ.ಡಿ. ಮೈದಾನದಲ್ಲಿ 65ನೇ ರಾಜ್ಯೋತ್ಸವ ಪ್ರಯುಕ್ತ ನಡೆದ ಪಥಚಲನದಲ್ಲಿ ತೃತೀಯ ಸ್ಥಾನ ಪಡೆದ ಸ್ಕೌಟ್ ಡದ ನಾಯಕನಿಗೆ ಜಿಲ್ಲಾ ಉಸ್ತುವರಿ ಸಚಿವರಾದ ಶ್ರೀ ಸತೀಶ್ ಜಾರಕಿಹೊಳಿ ಮಾನ ನೀಡುತ್ತಿರುವುದು. ಚಿತ್ರದಲ್ಲಿ ಬೆಳಗಾವಿ ಗ್ರಾಮೀಣ ಶಾಸಕರಾದ ಶ್ರೀ ಫಿರೋಜ್ ಬ್, ಜಿಲ್ಲಾಧಿಕಾರಿಗಳಾದ ಶ್ರೀ ಎನ್. ಜಯರಾಂರವರನ್ನು ಕಾಣಬಹುದು.



ಬೀದರ ಜಿಲ್ಲೆಯ ನೆಹರು ಕ್ರೀಡಾಂಗಣದಲ್ಲಿ 65ನೇ ಗಣರಾಜ್ಯೋತ್ಸವ ಪ್ರಯುಕ್ತ ನಡೆದ ಪಥಚಲನೆಯಲ್ಲಿ ಭಾಗವಹಿಸಿದ ಸ್ಕೌಟ್ಸ್‌ಗಳಿಂದ ಗೌರವ ವಂದನೆಯನ್ನು ಸ್ವೀಕರಿಸುತ್ತಿರುವ ಮಾನ್ಯ ಮಹಿಳಾ ಮತ್ತು ಮಕ್ಕಳ ಇಲಾಖೆ ಸಚಿವೆ ಶ್ರೀಮತಿ ಉಮಾಶ್ರೀರವನ್ನು ಕಾಣಬಹುದು.



ನ್ಯ ಶ್ರೀ ಬಾಬೂರಾವ್ ಸಿಂದನೂರು, ಜವಳಿ, ಬಂದರು ಒಳನಾಡು ಸಾರಿಗೆ ಖೆಗಳ ಸಚಿವರು ಹಾಗೂ ಜಿಲ್ಲಾ ಉಸ್ತುವಾರಿ ಸಚಿವರು ಯಾದಗಿರಿ ಜಿಲ್ಲೆಯ ಟ್ಸ್-ಗೈಡ್ಸ್‌ಗಳಿಗೆ ಪ್ರಶಸ್ತಿ ಪತ್ರಗಳನ್ನು ನೀಡಿ ಗೌರವಿಸಿದರು.



65ನೇ ಗಣರಾಜ್ಯೋತ್ಸವ ಪ್ರಯುಕ್ತ ಕೊಪ್ಪಳ ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಕಾರ್ಯಕ್ರಮದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳಿಂದ ಜಿಲ್ಲಾ ಉಸ್ತುವಾರಿ ಸಚಿವರಾದ ಮಾನ್ಯ ಶ್ರೀ ಶಿವರಾಜ ತಂಗಡಗಿ ಗೌರವ ವಂದನೆಯನ್ನು ಸ್ವೀಕರಿಸುತ್ತಿರುವುದು.



ವಿಶ್ವ ಚಿಂತನಾ ಮತ್ತು ಭಾತೃತ್ವ ದಿನಾಚರಣೆಯನ್ನು ದಿನಾಂಕ 22 ಫೆಬ್ರವರಿ 2014 ರಂದು ಶಾಂತಿಗೃಹ ತರಬೇತಿ ಮತ್ತು ಶಿಬಿರ ಕೇಂದ್ರದಲ್ಲಿ ಆಚರಿಸಲಾಯಿತು. ಸಂಸ್ಥಾಪಕರುಗಳಿಗೆ ಮುಖ್ಯ ಅತಿಥಿಗಳಾದ ಶ್ರೀ ಬಿ.ಜಿ. ನಂದಕುಮಾರ್ ಅವರಿಂದ ಉದ್ಘಾಟನೆ, ರಾಜ್ಯ ಮುಖ್ಯ ಆಯುಕ್ತ, ರಾಜ್ಯ ಕಾರ್ಯದರ್ಶಿ, ರಾಜ್ಯ ಜಂಟಿ ಕಾರ್ಯದರ್ಶಿ, ಪ್ರಭಾರಿ ರಾಜ್ಯ ತರಬೇತಿ ಆಯುಕ್ತೆ, ಸಾರ್ವಜನಿಕ ಶಿಕ್ಷಣ ಇಲಾಖೆ ಅಧಿಕಾರಿಗಳಾದ ಶ್ರೀ ಅನಂತನಾಯಕ್ ಹಾಗೂ ಶ್ರೀ ಹನುಮಂತಪ್ಪ ಅವರುಗಳು ಚಿತ್ರದಲ್ಲಿದ್ದಾರೆ.




ವಿಶ್ವ ಚಿಂತನಾ ಮತ್ತು ಭಾತೃತ್ವ ದಿನಾಚರಣೆಯಲ್ಲಿ ಭಾಗವಹಿಸಿದ್ದ ಮುಖ್ಯ ಅತಿಥಿಗಳೊಂದಿಗೆ ರಾಜ್ಯ ಸಂಸ್ಥೆ ಪದಾಧಿಕಾರಿಗಳು.



6 ಫೆಬ್ರವರಿ 2014ರಂದು ಕೊಂಡಜ್ಜಿ ತರಬೇತಿ ಕೇಂದ್ರದಲ್ಲಿ ರೇಂಜರ್ಸ್ ವಿಭಾಗದ ಪದಕ ತರಬೇತಿ ಶಿಬಿರದ ನಾಯಕಿಯಾಗಿ ಭಾಗವಹಿಸಿದ್ದ ದಿನಾಂಕ 31 ಜನವರಿ 2014ರಂದು ರಾಜ್ಯ ತರಬೇತಿ ಆಯುಕ್ತೆಯಾಗಿ ನಿವೃತ್ತಿ ಹೊಂದಿದ ಶ್ರೀಮತಿ ಕೆ.ಕೆ. ಲೀಲಾ ಅವರನ್ನು ದಾವಣಗೆರೆ ಜಿಲ್ಲಾ ಸಂಸ್ಥೆಯ ಫಲಪುಷ್ಪ ಹಾಗೂ ಶಾಲು ನೀಡಿ ಗೌರವಿಸಿದರು. ಶ್ರೀಯುತರುಗಳಾದ ಜಿ. ರಂಗರಾವ್, ವಿ.ಆರ್. ಫನಾತೆ, ಕೊಂಡಜ್ಜಿ ಬ. ಷಣ್ಮುಖಪ್ಪ, ಮುರುಘರಾಜೇಂದ್ರ ಚಿಗಟೇರಿ, ಪುಟ್ಟಮ್ಮ ಮಹಾರುದ್ರಯ್ಯ, ಎ. ಎಸ್. ಷಡಾಕ್ಷರಪ್ಪ, ಸುಖವಾಣಿ ಹಾಗೂ ಇತರ ನಾಯಕರುಗಳು ಚಿತ್ರದಲ್ಲಿದ್ದಾರೆ.



ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದ ಶ್ರೀ ಬಿ.ಜಿ. ನಂದಕುಮಾರ್, ಭಾ.ಆ.ಸೇ. ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ ಅವರು, ನಾವು WAGGS ಸಂಸ್ಥೆಗೆ ರಾಷ್ಟ್ರೀಯ ಸಂಸ್ಥೆ ಮೂಲಕ ಕಳುಹಿಸಲಿರುವ "ಚಿಂತನಾ ದಿನಾಚರಣೆ ನಿಧಿಗೆ" ದೇಣಿಗೆ ನೀಡುತ್ತಿರುವುದು. ರಾಜ್ಯ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.



6 ಫೆಬ್ರವರಿ 2014ರಂದು ಕೊಂಡಜ್ಜಿ ತರಬೇತಿ ಕೇಂದ್ರಕ್ಕೆ ಬೇಟಿ ನೀಡಿದ್ದ ನಿವೃತ್ತ ರಾಷ್ಟ್ರೀಯ ಸಂಸ್ಥೆ ನಿರ್ದೇಶಕ ಶ್ರೀ ಜಿ. ರಂಗರಾವ್ ಮತ್ತು ನಿವೃತ್ತ ಜಂಟಿ ನಿರ್ದೇಶಕ ಶ್ರೀ ವಿ.ಆರ್. ಫನಾತೆ ಅವರುಗಳಿಗೆ ರಾಜ್ಯ ಸಂಸ್ಥೆ ಹಾಗೂ ದಾವಣಗೆರೆ ಜಿಲ್ಲಾ ಸಂಸ್ಥೆಗಳಿಂದ ಗೌರವಿಸಲಾಯಿತು. ದಾವಣಗೆರೆ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಹಾಗೂ ತಮಿಳುನಾಡಿನ ರಾಜ್ಯ ಸಂಸ್ಥೆಯ ಪದಾಧಿಕಾರಿಗಳಾಗಿದ್ದ ಶ್ರೀಯುತರುಗಳಾದ ಸಿ.ಡಿ. ವಿವೇಕಾನಂದನ್, ಜಿ. ಮಹದೇವನ್, ವಿ.ಜೆ. ಪುರಂತರನ್ ಮತ್ತು ರೋವರ್ಸ್-ರೇಂಜರ್ಸ್ ಹಾಗೂ ನಾಯಕರುಗಳು ಚಿತ್ರದಲ್ಲಿದ್ದಾರೆ.



ದಿ॥ ಕೊಂಡಜ್ಜಿ ಬಸಪ್ಪ ಅವರ ಕಂಚಿನ ಪ್ರತಿಮೆಯೊಂದಿಗೆ ಶ್ರೀಯುತರುಗಳಾದ ಜಿ. ರಂಗರಾವ್, ವಿ.ಆರ್. ಫನಾತೆ ಹಾಗೂ ತಮಿಳುನಾಡು ರಾಜ್ಯ ಸಂಸ್ಥೆಯ ನಾಯಕರುಗಳು, ರಾಜ್ಯ ಮುಖ್ಯ ಆಯುಕ್ತರು ಮತ್ತು ದಾವಣಗೆರೆ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು.

# *EDITORIAL............*

*Strategic planning is an organization's process of defining its strategy, or direction, and making decisions on allocating its resources to pursue this strategy.*

*In order to determine the future direction of the organization, it is necessary to understand its current position and the possible avenues through which it can pursue particular courses of action. Generally, strategic planning deals with at least one of three key questions.*

1. *"What do we do?" – Scouting / Guiding with new innovative challenging programme to include emerging trends with reality based activities by retaining the values and fundamentals of our movement.*

2. *"For whom do we do it?" – for the young people of all age groups to attract new young people, to satisfy the present young members and to retain the young men/women who have completed the progressive stages.*

3. *"How do we excel?" – by involving young leaders, giving them ample of opportunities to prove their talent and space to express, by appointing right adult for right job, making professionals accountable to the tasks, utilizing the resources in transparent mobilization and also in a better way.*

*So WOSM/WAGGGS and APR is doing their level best to make Scouting/ Guiding one of the best youth organization with various strategically approaches. In India we have to come out with our own dreams and aspirations, to accept reality and get ready for a change by keeping the BS&G, young people and our fundamentals in our vision. That will be first step of strategical approach we need today.*

*Friends we are under the false belief that we know everything and what we do is the best. We are least concerned what happens around the world. We have few who really intend to do something better but unfortunately we have bigger groups who love to create hurdles and specialize in fault finding. Frankly speaking when WOSM and WAGGGS are talking about youth in decision making the BS&G is becoming an organization for adults and youth to whom the movement is dedicated is taking the back seat. Its time for a change. Lets bring in more young people in decision making.*

***M.A. KHALID***
*State Secretary*

# ರಾಜ್ಯ ಮುಖ್ಯ ಆಯುಕ್ತರ ನುಡಿ.........................

ಮಾನ್ಯರೇ,

ಕಳೆದ ಮೂರು ಸಂಚಿಕೆಗಳಲ್ಲಿ ನಾನು ರಾಜ್ಯದ ಸ್ಥಳೀಯ ಹಾಗು ಜಿಲ್ಲಾ ಸಂಸ್ಥೆಗಳ ಸಹೋದ್ಯೋಗಿಗಳಲ್ಲಿ ಮನವಿಮಾಡಿ – ಯಾವ ಯಾವ ಜಿಲ್ಲಾ ಸಂಸ್ಥೆಗಳಲ್ಲಿ ಈ ವರ್ಷದಲ್ಲಿ ಮೂಲತರಬೇತಿ ಶಿಬಿರವನ್ನು ಇಲ್ಲಿಯವರೆವಿಗೆ ಏರ್ಪಡಿಸಲು ಸಾಧ್ಯವಾಗಿಲ್ಲವೋ ಆ ಜಿಲ್ಲೆಗಳು ಒಂದು ಮೂಲ ತರಬೇತಿ ಕಾರ್ಯಕ್ರಮವನ್ನು ತಕ್ಷಣ ಏರ್ಪಡಿಸುವುದು ಅವಶ್ಯಕ ಹಾಗು ಅನಿವಾರ್ಯ ಎಂಬುದನ್ನು ಸ್ಪಷ್ಟಪಡಿಸಿರುತ್ತೇನೆ.

ಯಾವುದೇ ಜಿಲ್ಲಾ ಸಂಸ್ಥೆಯು ತನ್ನ ವಾರ್ಷಿಕ ಕಾರ್ಯಯೋಜನೆಯಂತೆ ಪ್ರತಿವರ್ಷವೂ ಒಂದು ಮೂಲತರಬೇತಿ ಕಾರ್ಯಕ್ರಮ ಏರ್ಪಡಿಸಿದಾಗ ಮಾತ್ರ – ಜಿಲ್ಲೆ ಮತ್ತು ರಾಜ್ಯ ಸಂಸ್ಥೆ ಒಟ್ಟಾಗಿ ತೀರ್ಮಾನಗೊಂಡಂತೆ ದಳಗಳ ಗುರಿ ಮುಟ್ಟಲು ಸಾಧ್ಯವೆಂಬುದನ್ನು ತಾವುಗಳೆಲ್ಲಾ ಸ್ವಾನುಭವದಿಂದ ಬಲ್ಲಿರಿ. ಹಲವಾರು ವರ್ಷ ಸರ್ವಶಿಕ್ಷಣ ಅಭಿಯಾನ ನೀಡಿದ ಅನುದಾನದ ಸಹಾಯ ಮತ್ತು ಜಿಲ್ಲಾ ಡಯಟ್ ಸಂಸ್ಥೆಗಳು ಹಾಗೂ ಜಿಲ್ಲಾ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರುಗಳು ನೀಡಿದ ಸುತ್ತೋಲೆಯ ಸಹಕಾರಗಳಿಂದ ಬಹಳಷ್ಟು ಜಿಲ್ಲಾ ಸಂಸ್ಥೆಗಳು ಮೂಲ ತರಬೇತಿ ಶಿಬಿರಗಳನ್ನು ಏರ್ಪಡಿಸಿ ತಮ್ಮ ಜಿಲ್ಲೆಯ ವಾರ್ಷಿಕ ಗುರಿಮುಟ್ಟುವಲ್ಲಿ ಯಶಸ್ವಿಯಾಗಿರುತ್ತಾರೆ.

ಆದರೆ ಕಳೆದೆರಡು–ಮೂರು ವರ್ಷಗಳಿಂದ ಸರ್ವಶಿಕ್ಷಣ ಅಭಿಯಾನದಿಂದ ಸ್ಕೌಟ್ಸ್–ಗೈಡ್ಸ್ ಚಳವಳಿಯ ಮೂಲ ತರಬೇತಿ ಶಿಬಿರಗಳಿಗೆ ಅನುದಾನ ನೀಡದಿರುವುದರಿಂದ, ಹಲವಾರು ಜಿಲ್ಲಾ ಸಂಸ್ಥೆಗಳು ತರಬೇತಿಗಳನ್ನು ಆಯೋಜಿಸದಿರುವುದು ನನ್ನ ಗಮನಕ್ಕೆ ಬಂದಿದೆ. ರಾಜ್ಯ ಸಂಸ್ಥೆ ಹಾಗು ಜಿಲ್ಲಾ ಸಂಸ್ಥೆಗಳು ಪ್ರತಿವರ್ಷ ಮೂಲತರಬೇತಿ ಶಿಬಿರಗಳನ್ನು ಏರ್ಪಡಿಸುವುದು ಕಡ್ಡಾಯವಾಗಿದ್ದು – ಈ ಬಗ್ಗೆ ನಾವುಗಳು ಸಾರ್ವಜನಿಕ ಶಿಕ್ಷಣ ಇಲಾಖೆಯ ಅಧಿಕಾರಿಗಳ ಗಮನ ಸೆಳೆದು ಈ ದಿಸೆಯಲ್ಲಿ ಕಾರ್ಯೋನ್ಮುಖರಾಗುವುದು ಅತ್ಯವಶ್ಯಕ ಎಂಬುದನ್ನು ಚಳವಳಿಯಲ್ಲಿರುವ ಸಹೋದ್ಯೋಗಿಗಳಲ್ಲಿ ಮತ್ತೊಮ್ಮೆ ಮನವಿ ಮಾಡುತ್ತೇನೆ.

ಇತ್ತೀಚೆಗೆ ರಾಜ್ಯ ಸಂಸ್ಥೆಯು ನೀಡಿದ ಸುತ್ತೋಲೆಯ ಮೂಲಕ ಮೂಲತರಬೇತಿ ಶಿಬಿರಗಳನ್ನು ಏರ್ಪಡಿಸುವಲ್ಲಿ ಜಿಲ್ಲಾ ಸಂಸ್ಥೆಗಳಿಗೆ ರಾಜ್ಯ ಸಂಸ್ಥೆಯಿಂದ ಕಬ್–ಸ್ಕೌಟ್ಸ್ ತರಬೇತಿಗಳಿಗೆ ರೂ.20,000/– ಹಾಗು ಬುಲ್‌ಬುಲ್–ಗೈಡ್ಸ್ ತರಬೇತಿಗಳಿಗೆ ರೂ.15,000/–ದಷ್ಟು ಸಹಾಯ ನೀಡುವುದಾಗಿ ತಿಳಿಸಲಾಗಿದೆ. ಈವರೆವಿಗೆ ಒಂದೆರಡು ಜಿಲ್ಲೆಗಳು ಮಾತ್ರ ಸಹಾಯಧನವನ್ನು ಅಪೇಕ್ಷಿಸಿ ರಾಜ್ಯ ಸಂಸ್ಥೆಗೆ ಪತ್ರ ಬರೆದಿರುತ್ತಾರೆ.

ದಿನಾಂಕ 10 ಮತ್ತು 11 ಫೆಬ್ರವರಿ 2014ರಂದು ರಾಜ್ಯ ಸಂಸ್ಥೆ ಶಾಂತಿಗೃಹದಲ್ಲಿ ಏರ್ಪಡಿಸಿದ್ದ ಜಿಲ್ಲಾ ಸಂಘಟಕರುಗಳ ಹಾಗು ಆಯುಕ್ತರುಗಳ – ಕಾರ್ಯದರ್ಶಿಗಳ – ಕೋಶಾಧಿಕಾರಿಗಳ ಸಮಾವೇಶದಲ್ಲಿ ಹಲವಾರು ಪ್ರಮುಖ ವಿಚಾರಗಳೊಂದಿಗೆ ಜಿಲ್ಲೆಗಳಲ್ಲಿ ಇದುವರೆವಿಗೆ ಮೂಲ ತರಬೇತಿ ಶಿಬಿರಗಳನ್ನು ಆಯೋಜಿಸದಿರುವ ಜಿಲ್ಲಾ ಸಂಸ್ಥೆಗಳ ಬಗ್ಗೆ ಚರ್ಚಿಸಿದ ಸಂಧರ್ಭದಲ್ಲಿ ರಾಜ್ಯ ಸಂಸ್ಥೆ ಇತ್ತೀಚೆಗೆ ನೀಡಿರುವ ತರಬೇತಿಗೆ ಸಹಾಯಧನ ನೀಡುವ ಸುತ್ತೋಲೆಯ ಬಗ್ಗೆ ಉಪಸ್ಥಿತರೆಲ್ಲರ ಗಮನ ಸೆಳೆದು ಮಾರ್ಚ್ – 2014ರೊಳಗೆ ಯಾವ ಯಾವ ಜಿಲ್ಲೆಗಳು ಮೂಲ ತರಬೇತಿ ಶಿಬಿರಗಳನ್ನು ಏರ್ಪಡಿಸಿಲ್ಲವೋ, ಅವರುಗಳು ತಕ್ಷಣ ತರಬೇತಿ ಶಿಬಿರ ಏರ್ಪಡಿಸಲು ಮನವಿಮಾಡಿರುತ್ತೇನೆ. ಈ ಬಗ್ಗೆ ಜಿಲ್ಲಾ ಸಂಸ್ಥೆಗಳು ತಕ್ಷಣ ಕಾರ್ಯಪ್ರವರ್ತರಾಗಬೇಕು

ರಾಷ್ಟ್ರೀಯ ಸಂಸ್ಥೆಯ ನಿವೃತ್ತ ನಿರ್ದೇಶಕರಾದ ಶ್ರೀ ಜಿ.ರಂಗರಾವ್ ಹಾಗು ನಿವೃತ್ತ ಜಂಟಿ ನಿರ್ದೇಶಕರಾದ ಶ್ರೀ ವಿ.ಆರ್.ಫನಾತೆ ಅವರುಗಳು ದಿನಾಂಕ 5 ರಿಂದ 10 ರವರೆವಿಗೆ ತಮ್ಮ ವೈಯಕ್ತಿಕ ಕಾರ್ಯಕ್ರಮದಲ್ಲಿ ಭಾಗವಹಿಸಲು ಬೆಂಗಳೂರಿನಲ್ಲಿದ್ದರು. ಇವರೀರ್ವರು ಬಹಳ ವರ್ಷಗಳ ಹಿಂದೆ ಕೊಂಡಜ್ಜಿ ತರಬೇತಿ ಕೇಂದ್ರವನ್ನು ವೀಕ್ಷಿಸಿದ್ದರು. ಅವರುಗಳು ಮತ್ತು ತಮಿಳುನಾಡು ರಾಜ್ಯ ಸಂಸ್ಥೆಯ ಹಿಂದಿನ ರಾಜ್ಯ ಕೋಶಾಧಿಕಾರಿ ಶ್ರೀ ಸಿ.ಡಿ. ವಿವೇಕಾನಂದನ್, ನಿವೃತ್ತ ರಾಜ್ಯ ತರಬೇತಿ ಆಯುಕ್ತ ಶ್ರೀ ಜಿ.ಮಹದೇವನ್ ಹಾಗು ನಿಪ್ಪೋ (NIPPO) ಸಂಸ್ಥೆಯ ಹಿರಿಯ ಪ್ರಧಾನ ವ್ಯವಸ್ಥಾಪಕ ಹಾಗು ಸ್ಕೌಟ್ ನಾಯಕ ಶ್ರೀ ವಿ.ಜಿ. ಪುರಂತರನ್ ಅವರುಗಳೊಂದಿಗೆ ದಿನಾಂಕ 6 ಫೆಬ್ರವರಿಯಂದು ಒಂದು ದಿವಸದ ಪ್ರವಾಸ ಮಾಡಿ ದಾವಣಗೆರೆ ಜಿಲ್ಲಾ ಸಂಸ್ಥೆಗೆ ಭೇಟಿನೀಡಿ – ಕೊಂಡಜ್ಜಿ ತರಬೇತಿ ಕೇಂದ್ರಕ್ಕೆ ಹೋಗಿ, ಅಲ್ಲಿ ದಾವಣಗೆರೆ ಜಿಲ್ಲಾ ಸಂಸ್ಥೆ ಏರ್ಪಡಿಸಿದ್ದ ರೋವರ್ಸ್–ರೇಂಜರ್ಸ್ ಬ್ಯಾಡ್ಜ್‌ವರ್ಕ್ ತರಬೇತಿಯ ಮುಕ್ತಾಯ ಸಮಾರಂಭದಲ್ಲಿ ಭಾಗವಹಿಸಿ ಶ್ರೀ ಜಿ.ರಂಗರಾವ್, ಶ್ರೀ ಫನಾತೆ ಹಾಗು ಇತರರು ಅವರುಗಳಿಗೆ ಮಾರ್ಗದರ್ಶನಮಾಡಿ ಶುಭಹಾರೈಸಿರುತ್ತಾರೆ. ಅವರುಗಳೆಲ್ಲರ ಪ್ರಶ್ನೆ – ಒಂದೇ ಜಿಲ್ಲೆಯಲ್ಲಿನ 160ಕ್ಕೂ ಹೆಚ್ಚಿನ ರೋವರ್ಸ್ ರೇಂಜರ್ಸ್‌ಗಳು ಪದಕ ತರಬೇತಿ ಶಿಬಿರದಲ್ಲಿ ಭಾಗವಹಿಸಿರುವುದು, ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಮುರುಘರಾಜೇಂದ್ರ ಜೆ. ಚಿಗಟೇರಿ ಹಾಗು ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಹಾಗು ಶಿಬಿರದ ನಾಯಕರುಗಳು ಸಭೆಯಲ್ಲಿದ್ದರು. ನಾನು ಮತ್ತು ಶ್ರೀ ಮುರುಘರಾಜೇಂದ್ರ ಚಿಗಟೇರಿ ಶ್ರೀ ಜಿ.ರಂಗರಾವ್ ಮತ್ತು ಶ್ರೀ ವಿ.ಆರ್.ಫನಾತೆ ಅವರನ್ನು ಶಾಲು ನೀಡಿ ಅಭಿನಂದಿಸಿ ಸನ್ಮಾನಿಸಿದೆವು. ಜಿಲ್ಲಾ ಸಂಸ್ಥೆಯವರು ಸ್ಕೌಟ್ ಶತಮಾನೋತ್ಸವದ ಸವಿನೆನಪಿಗಾಗಿ ತಯಾರಿಸಿದ್ದ ಬೆಳ್ಳಿಯ ಸ್ಮರಣಿಕೆಯನ್ನು ಅತಿಥಿಗಳೆಲ್ಲರಿಗೆ ನೀಡಿ ಗೌರವಿಸಿದರು. ಸಂಜೆ ಚಿತ್ರದುರ್ಗ ಜಿಲ್ಲಾ ಸಂಸ್ಥೆಗೆ ಭೇಟಿ ನೀಡಿ ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳೊಂದಿಗೆ ವಿಚಾರ ವಿನಿಮಯ ಮಾಡಿ ಜಿಲ್ಲೆಯ ಗೌರವಾತಿಥ್ಯವನ್ನು ಅತಿಥಿಗಳಿಗೆ ನೀಡಿ, ಅಲ್ಲಿಂದ ತುಮಕೂರಿನ ಶ್ರೀ ಕ್ಷೇತ್ರ ಸಿದ್ದಗಂಗಾ ಮಠಕ್ಕೆ ಬಂದು ಪರಮಪೂಜ್ಯ ಸ್ವಾಮೀಜಿ ಡಾ. ಶ್ರೀ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿ ಅವರ ಕೃಪಾಶೀರ್ವಾದವನ್ನು ಪಡೆದು ಪ್ರಸಾದದನಂತರ –ಡಾ.ಅನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರಕ್ಕೆ ತೆರಳಿ, ಅಲ್ಲಿ ಇತ್ತೀಚಿನ ವರ್ಷಗಳಲ್ಲಿ ನಿರ್ಮಾಣಗೊಂಡಿರುವ ಹಲವಾರು ನೂತನ ಮೂಲಭೂತ ಸೌಕರ್ಯಗಳ ಅಭಿವೃದ್ಧಿ ಕಾಮಗಾರಿಗಳನ್ನು ವೀಕ್ಷಣೆಮಾಡಿ ವಾಪಸಾದೆವು. ತುಮಕೂರಿನಲ್ಲಿ ಪೂಜ್ಯರುಗಳ ಭೇಟಿಮಾಡಿದ ಸಂಧರ್ಭದಲ್ಲಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ನಮ್ಮೊಂದಿಗಿದ್ದರು.

ಒಂದು ದಿನದ – ಮೂರು ಜಿಲ್ಲಾ ಸಂಸ್ಥೆಗಳ – ರಾಜ್ಯದ ಎರಡು ಅತ್ಯಂತ – ಸುಸಜ್ಜಿತ – ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರಗಳ ಸಂದರ್ಶನ – ಪರಮಪೂಜ್ಯ ಶ್ರೀ ಶ್ರೀ ಸಿದ್ದಗಂಗಾಶ್ರೀಗಳ ದರ್ಶನಾಶೀರ್ವಾದದ ಭಾಗ್ಯ ನಿಜಕ್ಕೂ ಸಂತಸ – ಹಾಗು – ಅಭಿಮಾನದ ಸಂಗತಿ. ಹಿರಿಯರೂ, ಸಜ್ಜನರೂ, ಕ್ರಿಯಾಶೀಲರುಗಳಾದ ಶ್ರೀ ಜಿ.ರಂಗರಾವ್ ಹಾಗು ಶ್ರೀ ವಿ.ಆರ್. ಫನಾತೆ ಮತ್ತು ತಮಿಳುನಾಡಿನ ಸಹೋದ್ಯೋಗಿಗಳಿಗೆ ಹಾಗು ನಾವು ಭೇಟಿ ನೀಡಿದ ಎಲ್ಲಾ ಮೂರು ಜಿಲ್ಲೆಗಳ ಪದಾಧಿಕಾರಿಗಳಿಗೆ, ಅತಿಥಿಗಳಿಗೆ ತೋರಿಸಿದ ಗೌರವಕ್ಕೆ ನನ್ನ ಕೃತಜ್ಞತೆಗಳು.

92ರ ಪ್ರಾಯದ ರಾಷ್ಟ್ರದ ಹಿರಿಯಣ್ಣ ಶ್ರೀ ವಿ.ಆರ್. ಫನಾತೆ, 82ರ ಪ್ರಾಯದ ಮುತ್ಸದ್ದಿ ನಾಯಕ – ರಾಷ್ಟ್ರೀಯ ಸಂಸ್ಥೆಯ ವಿವಿಧ ಹುದ್ದೆಗಳಲ್ಲಿ 25 ವರ್ಷಗಳ ಸುದೀರ್ಘ ಸೇವೆಗೈದು ರಾಷ್ಟ್ರೀಯ ಸಂಸ್ಥೆಗೆ – ಸ್ಕೌಟ್ – ಗೈಡ್ ಚಳವಳಿಯ ಗೌರವವನ್ನು ಏಷಿಯ ಪೆಸಿಫಿಕ್ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಹೆಚ್ಚಿಸಿ – ವಿಶ್ವ ಸ್ಕೌಟ್ ಸಂಸ್ಥೆಯು ಭಾರತದ ಸ್ಕೌಟ್–ಗೈಡ್ ನಾಯಕ – ನಾಯಕಿಯರುಗಳಿಗೆ ಇದುವರೆವಿಗೆ ನೀಡಿರುವ ನಾಲ್ಕು ಜನ ಹಿರಿಯ ನಾಯಕರಲ್ಲಿ, ರಾಷ್ಟ್ರದ ತರಬೇತಿ ನಾಯಕರುಗಳಲ್ಲಿ "Bronze Wolf" ಪ್ರಶಸ್ತಿಗೆ ಪುರಸ್ಕೃತರಾದ ಹೆಗ್ಗಳಿಕೆಗೆ ಪಾತ್ರರಾಗಿರುವ ಶ್ರೀ ಜಿ.ರಂಗರಾವ್ ನಮ್ಮೊಂದಿಗೆ ಎರಡು – ಮೂರು ದಿನ ಇದ್ದು, ತಮ್ಮ ಅನುಭವ ಮತ್ತು ವಿಚಾರಗಳಿಂದ ಮಾರ್ಗದರ್ಶನ ಮಾಡಿರುವುದು ಸಂತಸದ ವಿಷಯ.

ಈ ತಿಂಗಳ 15 ರಂದು ಬೆಂಗಳೂರು ದಕ್ಷಿಣ ಜಿಲ್ಲಾ ಸಂಸ್ಥೆಯ ವಾರ್ಷಿಕ ಜಿಲ್ಲಾ ರ್‍ಯಾಲಿಯು ಬಸವನಗುಡಿಯ ಮರಾಠ ಹಾಸ್ಟೆಲ್ ಆವರಣದಲ್ಲಿ ಅತ್ಯಂತ ಯಶಸ್ವಿಯಾಗಿ ಜರುಗಿತು. ಈ ರ್‍ಯಾಲಿಯಲ್ಲಿ 1800ಕ್ಕೂ ಹೆಚ್ಚಿನ ಕಬ್ಸ್, ಬುಲ್‌ಬುಲ್‌ಗಳು, ಸ್ಕೌಟ್ಸ್-ಗೈಡ್ಸ್‌ಗಳು, ರೋವರ್ಸ್-ರೇಂಜರ್ಸ್‌ಗಳು ಬೆಳಿಗ್ಗೆಯಿಂದ ಸಂಜೆಯವರೆಗೆ ಹಲವಾರು ಸಾಹಸಮಯ ಚಟುವಟಿಕೆಗಳನ್ನು ನಡೆಸಿ ಬಸವನಗುಡಿ ಸುತ್ತಮುತ್ತ Messenger of Peace ಹಾಗು ನಗರ ಸ್ವಚ್ಛತೆ, ನೈರ್ಮಲೀಕರಣ, ಪರಿಸರ ಸಂರಕ್ಷಣೆ ಫಲಕಗಳೊಂದಿಗೆ ಪಥಚಲನ ಏರ್ಪಡಿಸಿ, ಜಾನಪದ ನೃತ್ಯ, ಸ್ಕೌಟ್-ಗೈಡ್ ತತ್ತ್ವಗಳ ನಿರೂಪಣೆಗಳೊಂದಿಗೆ ಯಶಸ್ವಿಗೊಳಿಸಿದ್ದನ್ನು ವರದಿ ಮುಖಾಂತರ ಕೇಳಿದ ಮುಖ್ಯ ಅತಿಥಿಗಳಾಗಿದ್ದ ಶ್ರೇಷ್ಠ ಜಾನಪದ ವಿದ್ವಾಂಸರು, ರಾಜ್ಯ ಸಂಸ್ಥೆಯ ಪ್ರಕಟಣೆಗಳ ವಿಭಾಗದ ಅಧ್ಯಕ್ಷರೂ ಆದ ಶ್ರೀ. ಗೊ.ರು. ಚನ್ನಬಸಪ್ಪ, ಈ ವಿಭಾಗದ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಸದಸ್ಯರಾದ ಶ್ರೀ ಪಿ.ಎನ್. ಸದಾಶಿವ ಹಾಗೂ ನಾನು ಭಾಗವಹಿಸಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳನ್ನು ಅಭಿನಂದಿಸಿ, ರ್‍ಯಾಲಿಯಲ್ಲಿ ಭಾಗವಹಿಸಿದ್ದ ಕಬ್ಸ್, ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್‌ಗಳಿಗೆ, ರೋವರ್ಸ್-ರೇಂಜರ್ಸ್‌ಗಳಿಗೆ ಫಲಕ, ಪ್ರಶಸ್ತಿ ಪತ್ರಗಳನ್ನು ನೀಡಿ ಶುಭ ಹಾರೈಸಿದ್ದೇವೆ. ಶ್ರೀಯುತರುಗಳಾದ ಜಿಲ್ಲಾ ಮುಖ್ಯ ಆಯುಕ್ತ ಎಂ.ಕೆ. ಖಾನ್, ಜಿಲ್ಲಾ ಸ್ಕೌಟ್ ಆಯುಕ್ತ ಪಿ. ಪಳನಿ, ಜಿಲ್ಲಾ ಗೈಡ್ ಆಯುಕ್ತೆ, ಶ್ರೀಮತಿ ಉಮಾ ನಾಗೇಶ್, ಜಿಲ್ಲಾ ಕಾರ್ಯದರ್ಶಿ, ಎಂ.ಎಸ್. ಸತೀಶ್, ಜಿಲ್ಲಾ ಕೋಶಾಧಿಕಾರಿ ಎನ್. ಆನಂದ್, ಸಹ ಜಿಲ್ಲಾ ಕಾರ್ಯದರ್ಶಿ ಎ.ಎಸ್. ಮಧುಸೂಧನ್ ಹಾಗೂ ಇತರ ಜಿಲ್ಲೆಯ ನಾಯಕ-ನಾಯಕಿಯರು ಸಭೆಯಲ್ಲಿ ಭಾಗವಹಿಸಿದ್ದರು.

ದಿನಾಂಕ 28 ಜನವರಿ 2014ರಾಜ್ಯ ಯೋಜನಾಸಭೆಯು ರಾಜ್ಯ ಕೇಂದ್ರ ಕಚೇರಿಯಲ್ಲಿ ಜರುಗಿತು. ಜಿಲ್ಲಾ ಸಂಸ್ಥೆಗಳ ಹಲವಾರು ನಾಯಕರುಗಳು ಸಭೆಯಲ್ಲಿ ಭಾಗವಹಿಸಿ 2014-15ನೇ ಸಾಲಿನ ತರಬೇತಿ - ಕಾರ್ಯಕ್ರಮ ಮತ್ತು ಚಟುವಟಿಕೆಗಳ ಬಗ್ಗೆ ಪರಾಮರ್ಶಿಸಿ ಸೂಕ್ತ ಸಲಹೆ ಹಾಗು ಅವಶ್ಯ ಮಾರ್ಪಾಡುಗಳೊಂದಿಗೆ ಮುಂದಿನ ವರ್ಷದ ಯೋಜನೆಗಳನ್ನು ಅಂಗೀಕರಿಸಲಾಯಿತು.

ದಿನಾಂಕ 22 ಫೆಬ್ರವರಿ ಪ್ರತಿವರ್ಷದಂತೆ ಶಾಂತಿಗೃಹದಲ್ಲಿ "ವಿಶ್ವ ಚಿಂತನಾ - ವಿಶ್ವಭಾತೃತ್ವ ದಿನಾಚರಣೆಯನ್ನು" ಅತ್ಯಂತ ಸಡಗರ - ಸಂಭ್ರಮ - ಸಂತೋಷದಿಂದ ಆಚರಿಸಲಾಯಿತು. ಕಾಲೇಜು ಶಿಕ್ಷಣ ಇಲಾಖೆಯ ಆಯುಕ್ತರಾದ ಶ್ರೀ ಬಿ.ಜಿ. ನಂದಕುಮಾರ್ ಅವರು ಮುಖ್ಯ ಅತಿಥಿಗಳಾಗಿ ಕಾರ್ಯಕ್ರಮದಲ್ಲಿ ಭಾಗವಹಿಸಿ - ಸಂಸ್ಥಾಪಕರುಗಳ ಹುಟ್ಟುಹಬ್ಬದ ಆಚರಣೆ ಹಾಗು ಚಿಂತನಾ ದಿನಾಚರಣೆಯ ಉದ್ಘಾಟನಾ ದೀಪ ಬೆಳಗಿಸಿ - ಸ್ಕೌಟ್-ಗೈಡ್-ರೋವರ್-ರೇಂಜರ್ ಚಳವಳಿ ರಾಜ್ಯದ ಎಲ್ಲಾ ಶಾಲಾ-ಕಾಲೇಜುಗಳಲ್ಲಿ ಹೆಚ್ಚಿಸಲು ಬೇಕಾದ ಎಲ್ಲಾರೀತಿಯ ಸಹಾಯ - ಸಹಕಾರದ ಆಶ್ವಾಸನೆ ನೀಡಿರುತ್ತಾರೆ. ಈ ಕಾರ್ಯಕ್ರಮದಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಹಿರಿಯ ಅಧಿಕಾರಿಗಳಾದ ಶ್ರೀ ಅನಂತ್‌ನಾಯಕ್ ಹಾಗು ಶ್ರೀ ಹನುಮಂತಪ್ಪ ಅವರುಗಳು ಭಾಗವಹಿಸಿ ಶುಭಹಾರೈಸಿದರು. 800ಕ್ಕೂ ಹೆಚ್ಚು ಕಬ್-ಬುಲ್‌ಬುಲ್‌ಗಳು - ಸ್ಕೌಟ್ಸ್-ಗೈಡ್ಸ್‌ಗಳು-ರೋವರ್ಸ್-ರೇಂಜರ್ಸ್‌ಗಳು ಚಿಂತನಾ ದಿನಾಚರಣೆಯಲ್ಲಿ ಅತ್ಯಂತ ಸಂಭ್ರಮದಿಂದ ವಿವಿಧ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಕ್ರಿಯಾತ್ಮಕವಾಗಿ ಸ್ಪಂದಿಸಿದರು. ರಾಜ್ಯ ಸಂಸ್ಥೆ ಉಪಾಧ್ಯಕ್ಷೆ ಶ್ರೀಮತಿ ಸರೋಜ ವಿ. ನಾಯ್ಡು, ರಾಜ್ಯ ಸ್ಕೌಟ್ ಆಯುಕ್ತ ಶ್ರೀ ಟಿ.ಎಸ್.ಲೂಕಾಸ್, ರಾಜ್ಯ ಕಾರ್ಯದರ್ಶಿ ಶ್ರೀ ಎಂ.ಎ.ಖಾಲಿದ್, ರಾಜ್ಯ ಜಂಟಿ ಕಾರ್ಯದರ್ಶಿಗಳಾದ ಶ್ರೀಮತಿ ಬಿ.ವಿ.ರಾಮಲತಾ, ಶ್ರೀ ಎಂ.ಎ.ಚೆಲ್ಲಯ್ಯ, ಹಾಗು ಸ್ಕೌಟ್ಸ್-ಗೈಡ್ಸ್ ಚಳವಳಿಯ ಹಿರಿಯ ನಾಯಕ-ನಾಯಕಿಯರುಗಳು ಸಮಾರಂಭದಲ್ಲಿ ಭಾಗವಹಿಸಿದರು.

ತಮ್ಮ ವಿಶ್ವಾಸಿ

ಕೊಂಡಜ್ಜಿ ಬ. ಷಣ್ಮುಖಪ್ಪ

# Another Memorable Trip to Bangalore

G. RANGARAO
Former Director, BS&G, India

This time I went to Bangalore on a personal trip. Sri Ghanathayji from Secundurabad and Sarvasri Vivekanandan, Mahadevan and Purantharan of Tamilnadu also joined us. On 5th February I stayed with Shri Ghanathayji in the Shanthigruha Training Centre Guest House. Karnataka is one of the States in India having a separate Guide Headquarters. It is a full fledged Headquarters with the volunteers and professionals working under the guidance of Senior Leaders of the Movement. They have enough staff members to work with the Joint State Secretary. In addition to the accommodation they have a campsite with wooden shelters for camping. They can also accommodate Scouts and Guides in rooms and hall fully furnished. There is a separate structure which can be used as Session Hall. The Karnataka SHQ. is generous in helping the Natinal Headquarters by providing office accommodation for the Southern Regional Headquarters managed by an Assistant Director. I could spend some useful time both with the Guide Professionals and the Regional Staff. There was a good exchange of past experiences that we relived.

The Tamilnadu friends joined us on 6th February. The State Chief Commissioner Sri Shanmukhappa has kindly invited all of us to go round and see some of the District Headquarters and Campsites. Hence we proceeded to Davanagere. They have an excellent District Headquarters building with office rooms, meeting hall and an open space for Flag, Assembly etc. It is more than enough for District Association, indoor activities and meetings. I thought that every district in India, if equipped like this the quality of Scouting/Guiding will be far superior.

Later, we left for Kondajji Campsite and met about 180 Rovers - Rangers and Leaders who just finished Badge work camp. It was like a National Level Rover/ Ranger Samagam. Seeing so many young people (college students) in Scout/Guide uniform we were excited. That was a beautiful building in the campsite which was packed with uniformed youngsters. A big lake adjacent to the Camping areas added beauty to Campsite. We were taken round to see various training and camping facilities provided on the ground including an excellent guest house recently built in the Campus. I could recollect Sri Kondajji Basappa's visit to National Headquarters as a Central Minister in Scout Uniform. I had the fortune of paying a visit to Kondajji campsite along with him during the 1970-80 decade. The campsite has enough building

accommodation, camping and training equipment for indoor and outdoor activities of both young people and adults. The development of the campsite is well planned. We all felt that it was an ideally established campsite.

On our way to Tumkur we could visit Chitradurga District Headquarters. Here we could meet the Office Bearers of the District. Their enthusiasm and contribution in building up and maintaining an ideal District Headquarters, which is in the centre of the town, convenient for all district level activities, is praise worthy. Later we proceeded to Siddaganga Mutt, Tumkur and had Blessings of Dr. Shivakumara Mahaswamiji who is 106 years Old Tumkur. District Association Office bearers were present and later left to Besant Park Training Centre at Doddaballapur.

It was by evening we could reach Besant Park, After dinner the Tamilnadu friends left to catch the train. I and Sri Ghanathayji stayed back in the Guest House for the night. On 7th February Sri Shanmukhappaji joined us and took us round. We know that whenever International Level or World Level activities were to he held in India NHQ was using Besant Park Campus because of the facilities available here. The State Chief Commissioner, as a result of his being in office for long period could enlist the co-operation for financial support both from the State Government and Non-Governmental agencies. We could find well established camping areas, stores, indoor meeeting places, everything well assorted. We can conduct a State/Regional Level Rally or Jamboree with the material available on the ground. The Camping materials are well stored and maintained. The library building both at Besent Training Centre and Kondajji were built with oval shaped roofs.

The busts of lady B.P. and Mahatma Gandhi added to the spirit that prevails at Dr. Annie Besant Campus. The newly renovated Campfire Circle along with a stone gallery, with a raised flatform in between and this can accommodate over a thousand participants for an open air show.

On seeing all the structures and facilities' I was tempted to ask Sri Shanmukhappaji how well all these are put to use. I was very happy on coming to know from him that about 200 days in a year the campsites are put to use both by the members of our Movement and other organisations like NCC, B.Ed & D.Ed. Colleges and Voluntary Organisations. My joy knew no bounds on coming to see the campsites and the use they are put to. I thanked profusely the State Chief Commissioner and members of his team for the opportunity provided to us to visit two well equipped State Training Centres and District Associations with Committed Volunteers.

# ರಾಜ್ಯವಾರ್ತೆ.........

## ರಾಜ್ಯಮಟ್ಟದ ಪ್ರಕೃತಿ ಅಧ್ಯಯನ ಶಿಬಿರ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆಯ ವತಿಯಿಂದ ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆ ಮತ್ತು ಸ್ಥಳೀಯ ಸಂಸ್ಥೆ ಇದರ ಜಂಟಿ ಆಶ್ರಯದಲ್ಲಿ ರಾಜ್ಯ ಮಟ್ಟದ ರೋವರ್ಸ್ ಮತ್ತು ರೇಂಜರ್ಸ್ ಪ್ರಕೃತಿ ಅಧ್ಯಯನ ಶಿಬಿರವು ಡಾ.ಕೆ. ಶಿವರಾಮ ಕಾರಂತ ಸರಕಾರಿ ಪ್ರಥಮ ದರ್ಜೆ ಕಾಲೇಜು, ಬೆಳ್ಳಾರೆ ಇಲ್ಲಿ ಫೆಬ್ರವರಿ 7 ರಿಂದ 11 ರವರೆಗೆ ಜರುಗಿತು.

ದಿನಾಂಕ 07-02-2014 ರಂದು ಎನ್.ಜಿ. ಮೋಹನ್, ಜಿಲ್ಲಾ ಮುಖ್ಯ ಆಯುಕ್ತರು ಮಂಗಳೂರು ಇವರ ಅಧ್ಯಕ್ಷತೆಯಲ್ಲಿ ಡಾ.ಹೆಚ್. ಮಾಧವ ಭಟ್ ರವರು ದೀಪ ಬೆಳಗಿಸಿ ಶಿಬಿರವನ್ನು ಉದ್ಘಾಟಿಸಿದರು. ಸ್ಥಳೀಯ ಸಂಸ್ಥೆ ಅಧ್ಯಕ್ಷರಾದ ಶ್ರೀ ವಾಸದೇವ ನಡ್ಕರವರು ಸ್ವಾಗತಿಸಿದರು. ಕಾರ್ಯದರ್ಶಿ ಉದಯಕುಮಾರ್ ರವರು ಧನ್ಯವಾದ ನೀಡಿದರು. ಶ್ರೀ ಪ್ರತಿಮ್ ಕುಮಾರ್ ಮುನ್ನೋಟ ನೀಡಿದರು. ಸ್ಕೌಟರ್ ಶ್ರೀ ಲೋಕೇಶ್ ಕಾರ್ಯಕ್ರಮ ನಿರ್ವಹಿಸಿದರು. ಅತಿಥಿಗಳಾಗಿ ಶ್ರೀ ಅನಿಲ್ ರೈ, ಸದಸ್ಯರು ತಾಲೂಕು ಪಂಚಾಯತ್ ಸುಳ್ಯ, ಶ್ರೀ ವರಧಮ ಗೌಡ, ಕಾಮಧೇನು ಮಲ್ಟಿಫರಪಸ್ ಚಾರಿಟೇಬಲ್ ಟ್ರಸ್ಟ್ ಬೆಳ್ಳಾರೆ, ಶ್ರೀ ಉದಯ ಕುಮಾರ್ ಬೆಟ್ಟ ಅಧ್ಯಕ್ಷರು, ಕಲ್ಲಡ್ಕ ವ್ಯವಸಾಯ ಸೇವಾ ಸಹಕಾರಿ ಸಂಘ ಕಲ್ಮಕ್ಕ ಇವರು ಭಾಗವಹಿಸಿದರು. ಶ್ರೀಮತಿ ಕೆ.ಕೆ. ಲೀಲಾ ರಾಜ್ಯ ತರಬೇತಿ ಆಯುಕ್ತರು (ಗೈಡ್ಸ್) ರವರ ನಿವೃತ್ತಿಯಾದ ಬಗ್ಗೆ ಹಾಗೂ ಶ್ರೀಮತಿ ಜಾನಕಿ ವೇಣುಗೋಪಾಲ್ ಎಸ್.ಒ.ಸಿ. (ಗೈಡ್) ರವರ ದೀರ್ಘ ಸೇವೆಯನ್ನು ಗುರುತಿಸಿ ಜಿಲ್ಲಾ ಸಂಸ್ಥೆಯ ವತಿಯಿಂದ ಸನ್ಮಾನಿಸಲಾಯಿತು. "ಒಂದು ಬೊಗಸೆ ಹಸಿರು" ಎನ್ನುವ ಶಿರ್ಷಿಕೆಯಲ್ಲಿ ಪ್ರಕೃತಿ ಬಗ್ಗೆ ಸಂಪನ್ಮೂಲ ವ್ಯಕ್ತಿಯಾಗಿ ಶ್ರೀ ನರೇಂದ್ರ ರೈ ಪೆರ್ಲ ಇವರು ಉಪನ್ಯಾಸವನ್ನು ನೀಡಿದರು.

ದಿನಾಂಕ 08-02-2014 ರಂದು ಶ್ರೀಮತಿ ಲೀಲಾವತಿ ಶೆಟ್ಟಿ, ಪೆರುವಾಜೆಗುತ್ತು ಇವರು ಪ್ರಕೃತಿ ಅಧ್ಯಯನದ ಹೊರಸಂಚಾರಕ್ಕೆ ಹಸಿರು ನಿಶಾನೆ ತೋರಿಸುವ ಮೂಲಕ ಚಾಲನೆ ನೀಡಿದರು. "ಬಂಟ ಮಲೆ"ಗೆ ಚಾರಣದ ಮೂಲಕ ಪ್ರಕೃತಿ ಅಧ್ಯಯನವನ್ನು ಪ್ರಾರಂಭಿಸಲಾಯಿತು. ಅರಣ್ಯ ಇಲಾಖೆಯ ಶ್ರೀ ವಿಜಯಕುಮಾರ್ ಹಾಗೂ ಧೀವೀಶ್ ರವರು ಬೆಟ್ಟದ ಪರಿಚಯ ಮಾಡುವ ಮೂಲಕ ಸಹಕರಿಸಿದರು. ಆ ಬೆಟ್ಟದ ತುದಿಯಲ್ಲಿ ಮಧ್ಯಾಹ್ನದ ಭೋಜನವನ್ನು ಮಾಡಲಾಯಿತು. ಬೆಟ್ಟದಲ್ಲಿರುವ ವಿಶಿಷ್ಟ ರೀತಿಯ ಮರಗಳು ವಿವಿಧ ರೀತಿಯ ಪ್ರಾಣಿಗಳ ಹೆಜ್ಜೆ ಗುರುತುಗಳನ್ನು ಅರಣ್ಯ ಇಲಾಖೆ ಸಿಬ್ಬಂದಿಗಳಾದ ಶ್ರೀ ವಿಜಯಕುಮಾರ್ ಮತ್ತು ಶ್ರೀ ಧಿವೀಶ್ ರವರು ತಿಳಿಸುವ ಮೂಲಕ ಅಪರೂಪದ ಪ್ರಾಣಿಗಳ ಹೆಜ್ಜ ಗುರುತುಗಳನ್ನು ಅಧ್ಯಯನ ಮಾಡಲಾಯಿತು.

ಮರುದಿನ ಪಂಚಲಿಂಗೇಶ್ವರ ದೇವಸ್ಥಾನಕ್ಕೆ ಭೇಟಿ ನೀಡಿ ದೇವಸ್ಥಾನದ ವಠಾರದಲ್ಲಿ ಶುಚಿತ್ವ ಕಾರ್ಯಕ್ರಮ ಕೈಗೊಂಡರು. ಇದೇ ಸಂದರ್ಭದಲ್ಲಿ ಶ್ರೀ ರಾವಯ್ಯ ಭಟ್ (ದೇವಳದ ಅಧ್ಯಕ್ಷರು) ಹಿತವಚನ ನೀಡಿದರು. ಪ್ರಸಾದ ನೀಡಿ ಗೌರವಿಸಿದರು. ರೇಂಜರ್ಸ್ - ರೋವರ್ಸ್‌ಗಳೂ ಪಂಜಿಗಾರಿನಲ್ಲಿರುವ ಗುಡಿ ಕೈಗಾರಿಕಾ ವಸ್ತುಗಳನ್ನು ವೀಕ್ಷಿಸುತ್ತಾ ಬೆಳ್ಳಾರೆಗೆ ಆಗಮಿಸಿದರು. ಬೆಳ್ಳಾರೆ ಗ್ರಾಮ ಪಂಚಾಯತ್ ಸಹಯೋಗದಲ್ಲಿ ಸ್ವಚ್ಛತಾ ಕಾರ್ಯಕ್ರಮ ನಡೆಸಲಾಯಿತು. ರಾತ್ರಿ 8.30ಕ್ಕೆ ಕಾಲೇಜಿನ ಆವರಣದಲ್ಲಿ ಶಿಬಿರಾಗ್ನಿ ಕಾರ್ಯಕ್ರಮವನ್ನು ಕಾಲೇಜಿನ ವಿದ್ಯಾರ್ಥಿ - ವಿದ್ಯಾರ್ಥಿನಿಯರು ನಡೆಸಿಕೊಟ್ಟರು. ಇದರ ಉದ್ಘಾಟನೆಯನ್ನು ಶ್ರೀ ಪ್ರೇಮನಾಥ ರೈ, ಅಧ್ಯಕ್ಷರು ಭಾವೈಕ್ಯ ಯುವಕ ಮಂಡಲ ಪೆರುವಾಜೆ ಇವರು ನೆರವೇರಿಸಿದರು. ಶುಭ ಹಾರೈಕೆಯನ್ನು ಶ್ರೀ ಸುನಿಲ್ ರೈ ಅಧ್ಯಕ್ಷರು, 'ಆಸರೆ' ರುಡುಸೆಟ್ ಸಂಸ್ಥೆ ಉಜಿರೆ ಇವರು ನಡೆಸಿಕೊಟ್ಟರು.

ದಿನಾಂಕ 10-02-2014 ರಂದು "ಮಾನವೀಯ ಮೌಲ್ಯಗಳು" ಇದರ ಬಗ್ಗೆ ಪ್ರೊ. ಐವನ್ ಫ್ರಾನ್ಸಿಸ್ ಲೋಬೋರವರು ಸಂಪನ್ಮೂಲ ವ್ಯಕ್ತಿಯಾಗಿ ಉಪನ್ಯಾಸ ನೀಡಿದರು. ನಂತರ ಡೇನಿಯಲ್ ಸುಕುಮಾರ್‌ದಾಸ್ ರವರ ನಾಯಕತ್ವದಲ್ಲಿ ಶ್ರೀ ಪ್ರತಿಮ್ ಕುಮಾರ್, ಶ್ರೀ ಪ್ರಭಾಕರ್ ಭಟ್, ಶ್ರೀಮತಿ ಎಸ್.ಕೆ. ಪ್ರಭಾ, ಶ್ರೀಮತಿ ಕೆ.ಕೆ. ಲೀಲಾ, ಅಶ್ವಿತಾ, ಶ್ರೀ ಬೋರೇಗೌಡರು ಇವರುಗಳು ಮೂಲಾಧಾರಗಳು, ಪ್ರಗತಿಪರ ಶಿಕ್ಷಣ ಮುಂತಾದ ವಿಷಯಗಳ ಬಗ್ಗೆ ಮಾಹಿತಿ ನೀಡಿದರು.

ಸಂಜೆ ಗ್ರಾಮ ಪಂಚಾಯತ್ ಅಧ್ಯಕ್ಷರವರ ಅಧ್ಯಕ್ಷತೆಯಲ್ಲಿ ಸಮಾರೋಪ ಸಮಾರಂಭ ನಡೆಯಿತು. ವೇದಿಕೆಯಲ್ಲಿ ಅತಿಥಿಗಳಾಗಿ ಶ್ರೀಮತಿ ಆಶಾ ತಿಮ್ಮಪ್ಪ ಸದಸ್ಯರು ದ.ಕ. ಜಿಲ್ಲಾ ಪಂಚಾಯತ್ ಶ್ರೀ ರಮೇಶ್ ಶೆಟ್ಟಿ ಪೆರುವಾಜೆ ಸದಸ್ಯರು, ಕಾಲೇಜು ಅಭಿವೃದ್ಧಿ ಸಮಿತಿ, ಶ್ರೀ ಬಿ. ಬಾಲಕೃಷ್ಣ ಭಟ್, ಪ್ರಾಂಶುಪಾಲರು ಡಾ. ಕೆ. ಶಿವರಾಮ ಕಾರಂತ ಸರಕಾರಿ ಪ್ರಥಮ ದರ್ಜೆ ಕಾಲೇಜು, ಬೆಳ್ಳಾರೆ ಶ್ರೀ ವಾಸುದೇವ ನಡ್ಕ, ಶ್ರೀ ದೇವಿ ಪ್ರಸಾದ್ ಜಾಕೆ, ಶ್ರೀಮತಿ ಎಸ್.ಕೆ. ಪ್ರಭಾ, ಶ್ರೀಮತಿ ಕೆ.ಕೆ. ಲೀಲಾ ಉಪಸ್ಥಿತರಿದ್ದರು. ರೇಂಜರ್ ನಾಯಕಿ ಶ್ರೀಮತಿ ಅಶ್ವಿತಾ ಸ್ಪೂರ್ತಿ ಸಲ್ದಾನ ಶಿಬಿರದ ವರದಿಯನ್ನು ನೀಡಿದರು. ಶ್ರೀ ವಾಸುದೇವ ಧನ್ಯವಾದ ನೀಡಿದರು. ನೆಲ್ಸನ್ ಕ್ಯಾಸ್ಟಲಿನ್ ರವರು ಕಾರ್ಯಕ್ರಮ ನಿರ್ವಹಿಸಿದರು. ರಾತ್ರಿ 8.30ಕ್ಕೆ ಶಿಕ್ಷಣದ ಬಗ್ಗೆ ಅರಿವು ಮೂಡಿಸುವ ಯಕ್ಷಗಾನದಲ್ಲಿ ಕುಮಾರಸ್ವಾಮಿ ವಿದ್ಯಸಂಸ್ಥೆಯ ವಿದ್ಯಾರ್ಥಿಗಳು ಹಾಗೂ ಶಿಕ್ಷಕ-ಶಿಕ್ಷಕಿಯರು ಭಾಗವಹಿಸಿದ್ದರು. ಸಂದರ್ಭದಲ್ಲಿ ಸುಳ್ಯ ಕ್ಷೇತ್ರ ಶಿಕ್ಷಣಾಧಿಕಾರಿ ಸುಳ್ಯ ಶ್ರೀ ಮಲ್ಲೇಸ್ವಾಮಿರವರು, ಡಾ. ಜಯಪ್ರಕಾಶ್ ವೈದ್ಯಾಧಿಕಾರಿಗಳು ಮತ್ತು ಶ್ರೀ ಸಚಿನಾಂದ ಶೆಟ್ಟಿ ಉಪಸ್ಥಿತರಿದ್ದರು. ಮರುದಿನ ಬೆಳಿಗ್ಗೆ ಸರ್ವಧರ್ಮ ಪ್ರಾರ್ಥನೆಯನ್ನು ಶ್ರೀಮತಿ ಎಸ್.ಕೆ. ಪ್ರಭಾರವರು ನಡೆಸಿಕೊಟ್ಟರು. ಉಪಹಾರದ ಬಳಿಕ ಶಾಲಾ ಶುಚಿತ್ವ ಕಾರ್ಯಕ್ರಮ ನಡೆದು ಅಪರಾಹ್ನ 1.00 ಗಂಟೆ ಶಿಬಿರ ಮುಕ್ತಾಯಗೊಂಡಿತು.

ಮಂಗಳೂರಿನ ಶ್ರೀ ಕೆ.ಎಸ್. ಪ್ರತಿಮ್ ಕುಮಾರ್, ರೋವರ್ ವಿಭಾಗದ ನಾಯಕರಾಗಿದ್ದರು. ಮೂಡಬಿದ್ರೆಯ ಶ್ರೀಮತಿ ಆಶಿತಾ ಸ್ಪೂರ್ತಿ ಇವರು ರೇಂಜರ್ ವಿಭಾಗಕ್ಕೆ ನಾಯಕಿಯಾಗಿ ಕರ್ತವ್ಯ ನಿರ್ವಹಿಸಿದರು.

# ರಾಜ್ಯ ಕೇಂದ್ರ ಕಾರ್ಯಾಲಯದಲ್ಲಿ 65ನೇ ಗಣರಾಜ್ಯೋತ್ಸವ ದಿನಾಚರಣೆ

ದಿನಾಂಕ 26-01-2014 ರಂದು ಗಣರಾಜ್ಯೋತ್ಸವ ದಿನಾಚರಣೆಯನ್ನು ರಾಜ್ಯ ಕೇಂದ್ರ ಕಾರ್ಯಾಲಯದಲ್ಲಿ ಆಚರಿಸಲಾಯಿತು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಬೆಳಿಗ್ಗೆ 8.30ಕ್ಕೆ ಧ್ವಜಾರೋಹಣ ನೆರವೇರಿಸಿ ಮಾತನಾಡುತ್ತಾ, ರಾಷ್ಟ್ರನಾಯಕರುಗಳ ಆದರ್ಶಗಳನ್ನು ಪಾಲಿಸಲು ಕರೆ ನೀಡಿದರು. ಕಾರ್ಯಕ್ರಮದಲ್ಲಿ ರಾಜ್ಯ ಜಂಟಿ ಕಾರ್ಯದರ್ಶಿಗಳಾದ ಶ್ರೀ ಎಂ.ಎ. ಚೆಲ್ಲಯ್ಯ, ಶ್ರೀಮತಿ ಬಿ.ವಿ. ರಾಮಲತಾ, ಕೇಂದ್ರ ಸ್ಥಾನಿಕ ಅಯುಕ್ತ ಶ್ರೀ ಕೆ. ತಿಮ್ಮಯ್ಯ, ರಾಜ್ಯ ಪರಿಷತ್ ಸದಸ್ಯರಾದ ಶ್ರೀ ಆರ್.ಡಿ. ಮೂರ್ತಿ, ಬೆಂಗಳೂರು ದಕ್ಷಿಣ ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಕೆ.ಎಸ್. ಶಿವಕುಮಾರ್ ಹಾಗು ರಾಜ್ಯ ಸಂಸ್ಥೆ, ಜಿಲ್ಲಾ ಸಂಸ್ಥೆಗಳ ನಾಯಕರುಗಳು ಭಾಗವಹಿಸಿದ್ದರು.

ಬೆಂಗಳೂರು ಉತ್ತರ ಹಾಗೂ ದಕ್ಷಿಣ ಜಿಲ್ಲೆಗಳಿಂದ ಸುಮಾರು 400 ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್, ರೋವರ್ಸ್-ರೇಂಜರ್ಸ್, ಸ್ಕೌಟರ್ಸ್-ಗೈಡರ್ಸ್ ಮತ್ತು ಪೋಷಕರು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ನಂತರ ನಡೆದ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ವಿವಿಧ ಶಾಲೆಗಳ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

ಶ್ರೀ ಕೆ.ವಿ. ಕೃಷ್ಣಸ್ವಾಮಿರಾವ್, ರಾಜ್ಯ ಸಂಸ್ಥೆಯ ಹಿರಿಯ ಸದಸ್ಯರು ಹಾಗೂ ಶ್ರೀ ಆರ್.ಡಿ. ಮೂರ್ತಿ ರಾಜ್ಯ ಪರಿಷತ್ ಸದಸ್ಯರುಗಳು ಪ್ರಾಯೋಜಿಸಿದ್ದ ಬಹುಮಾನಗಳನ್ನು ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಭಾಗವಹಿಸಿ, ಉತ್ತಮ ಪ್ರದರ್ಶನ ನೀಡಿದವರಿಗೆ ವಿತರಿಸಲಾಯಿತು.

# ವಿಶ್ವ ಭ್ರಾತೃತ್ವ ಮತ್ತು ವಿಶ್ವ ಚಿಂತನಾ ದಿನಾಚರಣೆ

ದಿನಾಂಕ 22-02-2014 ರಂದು ಶಾಂತಿಗೃಹ, ಗೈಡ್ ತರಬೇತಿ ಮತ್ತು ಶಿಬಿರ ಕೇಂದ್ರ, ಅರಮನೆ ರಸ್ತೆ, ಬೆಂಗಳೂರು. ಇಲ್ಲಿ ಸ್ಕೌಟ್ ಚಳುವಳಿಯ ಸಂಸ್ಥಾಪಕರಾದ ಲಾರ್ಡ್ ಬೇಡನ್ ಪೊವೆಲ್‌ರ ಮತ್ತು ಅವರ ಧರ್ಮ ಪತ್ನಿ ಲೇಡಿ ಬೇಡನ್ ಪೊವೆಲ್ಲರವರ ಜನ್ಮ ದಿನವನ್ನು ವಿಶ್ವಭ್ರಾತೃತ್ವ ಮತ್ತು ವಿಶ್ವ ಚಿಂತನ ದಿನವನ್ನಾಗಿ ಆಚರಿಸಲಾಯಿತು.

ಇದರ ಅಂಗವಾಗಿ ಬೆಳಿಗ್ಗೆ ಪ್ರಾರ್ಥನೆ, ಧ್ವಜಾರೋಹಣ ಮತ್ತು ಸರ್ವಧರ್ಮ ಪ್ರಾರ್ಥನೆ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿತ್ತು.

ನಂತರ ನಡೆದ ಉದ್ಘಾಟನಾ ಸಮಾರಂಭದಲ್ಲಿ ಶ್ರೀ ಬಿ.ಜಿ. ನಂದಕುಮಾರ್ ಭಾ.ಆ.ಸೇ. ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಕರ್ನಾಟಕ ಸರ್ಕಾರ ಇವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಇವರು ತಮ್ಮ ಉದ್ಘಾಟನಾ ಭಾಷಣದಲ್ಲಿ ತಾವು ವಿದ್ಯಾರ್ಥಿದೆಸೆಯಲ್ಲಿ ಸ್ಕೌಟ್ ಆಗಿದ್ದನ್ನು ನೆನಪಿಸಿಕೊಂಡು ಈ ಚಳುವಳಿಯು ಜವಾಬ್ದಾರಿಯುತ ಪ್ರಜೆಗಳನ್ನಾಗಿ ಮಾಡುವ ನಿಟ್ಟಿನಲ್ಲಿ ನಡೆಸುತ್ತಿರುವ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಭಾಗವಹಿಸುವಂತೆ ಕರೆ ನೀಡಿದರು. ಕಾಲೇಜುಗಳಲ್ಲಿ ರೋವರ್, ರೇಂಜರ್ ಘಟಕಗಳನ್ನು ಪ್ರಾರಂಭಿಸಿ ತರಬೇತಿ ನೀಡುವ ನಿಟ್ಟಿನಲ್ಲಿ ಎಲ್ಲ ರೀತಿಯ ಸಹಕಾರ ನೀಡುವುದಾಗಿ ತಿಳಿಸಿದರು.

ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು, ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಕಾಲೇಜುಗಳಲ್ಲಿ ರೋವರ್ - ರೇಂಜರ್ ಘಟಕಗಳನ್ನು ಪ್ರಾರಂಭಿಸಲು ಸಹಕಾರ ನೀಡುವುದಾಗಿ ತಿಳಿಸಿದ ಶ್ರೀ ನಂದಕುಮಾರ್, ಭಾ.ಆ.ಸೇ. ಅವರಿಗೆ ಅಭಿನಂದನೆ ತಿಳಿಸಿದರು.

ಸಾರ್ವಜನಿಕ ಶಿಕ್ಷಣ ಇಲಾಖೆಯ ಪರವಾಗಿ ಶ್ರೀ ಹನುಮಂತಪ್ಪ, ಹಿರಿಯ ಸಹಾಯಕ ನಿರ್ದೇಶಕರು(ಯೋಜನೆ) ಮತ್ತು ಶ್ರೀ ಅನಂತನಾಯ್ಕ, ಹಿರಿಯ ಸಹಾಯಕ ನಿರ್ದೇಶಕರು (ದೈಹಿಕ ಶಿಕ್ಷಣ,) ಅತಿಥಿಗಳಾಗಿ ಭಾಗವಹಿಸಿದ್ದರು.

ಶ್ರೀಮತಿ ಸರೋಜಾ ವಿ. ನಾಯ್ಡು, ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಮತ್ತು ಶ್ರೀ ಟಿ.ಎಸ್. ಲೂಕಾಸ್, ರಾಜ್ಯ ಆಯುಕ್ತರು(ಸ್ಕೌಟ್) ಉಪಸ್ಥಿತರಿದ್ದರು.

ಆರಂಭದಲ್ಲಿ ಶ್ರೀ ಎಂ.ಎ. ಖಾಲಿದ್, ರಾಜ್ಯ ಕಾರ್ಯದರ್ಶಿಯವರು ಎಲ್ಲರನ್ನು ಸ್ವಾಗತಿಸಿದರು. ಶ್ರೀಮತಿ ಬಿ.ವಿ. ರಾಮಲತಾ, ರಾಜ್ಯ ಜಂಟಿ ಕಾರ್ಯದರ್ಶಿ(ಗೈಡ್) ಪ್ರತಿಜ್ಞೆಯ ಪುನರ್ ಧೃಡೀಕರಣ ಕಾರ್ಯಕ್ರಮ ನಡೆಸಿಕೊಟ್ಟರು. ಶ್ರೀ ಎಂ.ಎ. ಚೆಲ್ಲಯ್ಯ, ರಾಜ್ಯ ಜಂಟಿ ಕಾರ್ಯದರ್ಶಿ(ಸ್ಕೌಟ್) ವಂದನಾರ್ಪಣೆ ಸಲ್ಲಿಸಿದರು. ಸ್ಕೌಟ್-ಗೈಡ್, ರೋವರ್-ರೇಂಜರ್‌ಗಳು ಬಿ.ಪಿ. ಮತ್ತು ಲೇಡಿ ಬಿ.ಪಿ. ಯವರ ಬಗ್ಗೆ ಮಾತನಾಡಿದರು.

ಸಭೆಯ ನಂತರ ಚಿತ್ರಕಲಾ ಸ್ಪರ್ಧೆ, ಭಾಷಣ ಸ್ಪರ್ಧೆ, ಗುಂಪುಚರ್ಚೆ, ಅಭಿನಯ ಗೀತೆ, ಭಾವೈಕ್ಯತಾ ಗೀತೆ, ರಸಪ್ರಶ್ನೆ, ವಿನೋದ ಆಟಗಳು, ಅಭಿನಯ ಮುಂತಾದ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಯಿತು. ಸ್ಪರ್ಧೆಗಳಲ್ಲಿ ವಿಜೇತರಾದವರಿಗೆ ಬಹುಮಾನವನ್ನು ನೀಡಲಾಯಿತು. ಬೆಂಗಳೂರು ಉತ್ತರ ಮತ್ತು ಬೆಂಗಳೂರು ದಕ್ಷಿಣ ಜಿಲ್ಲೆಗಳಿಂದ 700 ಮಂದಿ ಕಬ್/ಬುಲ್‌ಬುಲ್/ ಸ್ಕೌಟ್/ಗೈಡ್/ರೋವರ್ ಮತ್ತು ರೇಂಜರ್‌ಗಳು, ದಳನಾಯಕ/ನಾಯಕಿಯರು ಮತ್ತು ಜಿಲ್ಲಾ ಪದಾಧಿಕಾರಿಗಳು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

ಇದರ ಅಂಗವಾಗಿ ಚಾಣಕ್ಯ ಸ್ಕೌಟ್ ಮುಕ್ತದಳ, ಕೆ.ಎಲ್.ಇ. ಸೊಸೈಟಿಯ ನಿಜಲಿಂಗಪ್ಪ ಕಾಲೇಜ್, ಕ್ಲ್ಯೂನಿ ಕಾನ್ವೆಂಟ್ ಶಾಲೆ ಮತ್ತು ಕಂಠೀರವ ಮುಕ್ತದಳದ ಸ್ಕೌಟ್ ಗೈಡ್‌ಗಳು ಹಾಗೂ ರೋವರ್-ರೇಂಜರ್‌ಗಳು ವಿವಿಧ ಆಸ್ಪತ್ರೆಗಳಿಗೆ ಭೇಟಿನೀಡಿ ಒಳರೋಗಿಗಳಿಗೆ ಹಣ್ಣು ನೀಡಿ ಬೇಗ ಗುಣಮುಖವಾಗಲೆಂದು ಹಾರೈಸಿದರು. ಬೆಂಗಳೂರು ಉತ್ತರ ಜಿಲ್ಲೆಯ ಸಹಾಯಕ ಜಿಲ್ಲಾ ಆಯುಕ್ತರಾದ ಶ್ರೀಮತಿ ಮುನಿರಾ ಮೇಸ್ತ್ರಿರವರು ಆಸ್ಪತ್ರೆಗಳಿಗೆ ಭೇಟಿ ನೀಡಿ ಗುಣಮುಖರಾಗಲೆಂದು ಹಾರೈಸಿದರು.

**- ರಾಜ್ಯ ಕಾರ್ಯದರ್ಶಿ**

# ಜಿಲ್ಲಾ ವಾರ್ತೆಗಳು.................

## ಹಾವೇರಿ

ದಿನಾಂಕ 08-01-2014 ರಂದು ಎನ್.ಪಿ.ಎಸ್. ನಂ.2, ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಕಾರ್ಯಾಲಯ ಹಾವೇರಿಯಲ್ಲಿ ಒಂದು ದಿನದ ಪದಕ ಬೋಧಕರ ಮತ್ತು ಪದಕ ಪರೀಕ್ಷಕರ ಮಾಹಿತಿ ಶಿಬಿರ ಮತ್ತು ಪ್ರಧಾನ ಮಂತ್ರಿ ಪಾರಿತೋಷಕ ಮಾಹಿತಿ ಶಿಬಿರವನ್ನು ಸಂಘಟಿಸಲಾಯಿತು.

ಶ್ರೀಮತಿ ಮಾಧುರಿ ದೇವಧರ, ಜಿಲ್ಲಾ ಮುಖ್ಯ ಆಯುಕ್ತರು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಹಾವೇರಿ ಇವರು ಉದ್ಘಾಟನೆಯನ್ನು ಮಾಡಿ ಪದಕ ಬೋಧಕರು ಮತ್ತು ಪದಕ ಪರೀಕ್ಷಕರು ಪ್ರತಿಯೊಂದು ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳು ರಾಜ್ಯಪುರಸ್ಕಾರ ಮತ್ತು ರಾಷ್ಟ್ರಪತಿ ಪುರಸ್ಕಾರ ಅವಾರ್ಡ್ ಪಡೆಯುವಂತೆ ಸರಿಯಾದ ರೀತಿಯಲ್ಲಿ ಮಾರ್ಗದರ್ಶನ ನೀಡಬೇಕೆಂದು ತಿಳಿಸಿದರು. ಈ ಕಾರ್ಯಕ್ರಮದಲ್ಲಿ ಶ್ರೀಮತಿ ಶೋಭಾ ಕರ್ಜಗಿ, ಜಿಲ್ಲಾ ಗೈಡ್ ಕಮೀಶನರ್, ಶ್ರೀ ಆರ್. ಆರ್. ಕಾಶೇಪ್ಪನವರ, ಜಿಲ್ಲಾ ಕಾರ್ಯದರ್ಶಿ, ಶ್ರೀ ಎಂ.ಆರ್. ಪಾಟೀಲ, ಡಿ.ಟಿ.ಸಿ.(ಎಸ್.) ಶ್ರೀಮತಿ ಉಮಾ ಮರಿಗೆಂಚಣ್ಣವರ ಡಿ.ಟಿ.ಸಿ.(ಜಿ) ಕುಮಾರಿ ಶೃತಿ ದಾನರೆಡ್ಡಿ ಡಿ.ಓ.(ಜಿ.) ಭಾಗವಹಿಸಿದ್ದರು. ಈ ಮಾಹಿತಿ ಶಿಭಿರದಲ್ಲಿ 35 ಸ್ಕೌಟ್ಸ್ ಮಾಸ್ಟರ್ ಮತ್ತು 19 ಜನ ಗೈಡ್ ಕ್ಯಾಪ್ಟನ್ ಭಾಗವಹಿಸಿದ್ದರು.

*************

ಹಾವೇರಿ ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ 65ನೇ ಗಣರಾಜ್ಯೋತ್ಸವ ದಿನಾಚರಣೆಯ ಕಾರ್ಯಕ್ರಮದಲ್ಲಿ ಹಾವೇರಿ ನಗರದ ಕೆ.ಎಲ್.ಇ. ಪ್ರೌಢಶಾಲೆಯ ಸ್ಕೌಟ್ಸ್ ಮತ್ತು ಗೈಡ್ಸ್ ತಂಡವು ಮತ್ತು ಜೆ.ಪಿ. ರೋಟರಿ ಪ್ರೌಢಶಾಲಾ ಸ್ಕೌಟ್ಸ್ ತಂಡವು ಪಥಸಂಚಲನದಲ್ಲಿ ಭಾಗವಹಿಸಿದರು. ಅದರಲ್ಲಿ ಕೆ.ಎಲ್.ಇ., ಪ್ರೌಢಶಾಲಾ ಸ್ಕೌಟ್ಸ್ ತಂಡಕ್ಕೆ ತೃತೀಯ ಸ್ಥಾನ ಲಭಿಸಿತು.

ಮಾನ್ಯ ಶ್ರೀ ರುದ್ರಪ್ಪ ಲಮಾಣಿ, ಶಾಸಕರು, ಹಾವೇರಿ ಇವರು ಶೀಲ್ಡ್ ಮತ್ತು ಪ್ರಶಸ್ತಿ ನೀಡಿ ಗೌರವಿಸಿದರು. ಈ ಸಮಾರಂಭದಲ್ಲಿ ಶ್ರೀ ರಾಜೇಂದ್ರ ಹಾವೇರಣ್ಣನವರ, ಅಧ್ಯಕ್ಷರು, ಜಿಲ್ಲಾ ಪಂಚಾಯತ್, ಹಾವೇರಿ. ಶ್ರೀಮತಿ ಶೋಭಾ ನಿಸ್ಸೀಮಗೌಡ್ರ. ಉಪಾಧ್ಯಕ್ಷರು, ಜಿಲ್ಲಾ ಪಂಚಾಯತ್, ಹಾವೇರಿ, ಶ್ರೀ ಆಯ್.ಯು. ಪಠಾಣ ಅಧ್ಯಕ್ಷರು, ನಗರಸಭೆ, ಹಾವೇರಿ ಶ್ರೀಮತಿ ರತ್ನಾ ಭೀಮಕ್ಕನವರ, ಉಪಾಧ್ಯಕ್ಷರು, ನಗರಸಭೆ ಹಾವೇರಿ, ಶ್ರೀಮತಿ ರತ್ನಾ ಭೀಮಕ್ಕನವರ, ಉಪಾಧ್ಯಕ್ಷರು, ನಗರಸಭೆ. ಹಾವೇರಿ ಹಾಜರಿದ್ದರು.

*************

ದಿನಾಂಕ 24-01-2014 ರಂದು ಹಾವೇರಿ ತಾಲೂಕಿನ ಸ್ಕೌಟ್ ಮಾಸ್ಟರ್ ಮತ್ತು ಗೈಡ್ ಕ್ಯಾಪ್ಟನ್ನರವರಿಗೆ ಒಂದು ದಿನದ ಪುನಶ್ಚೇತನ ಶಿಬಿರವನ್ನು ಎನ್.ಪಿ.ಎಸ್.ನಂ.2, ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಕಾರ್ಯಾಲಯ ಹಾವೇರಿಯಲ್ಲಿ ಏರ್ಪಡಿಸಲಾಯಿತು. ಈ ಪುನಶ್ಚೇತನ ಶಿಬಿರವನ್ನು ಶ್ರೀ ಎಂ.ಬಿ. ಅಂಬಿಗೇರ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಎ.ಡಿ.ಸಿ., ಉದ್ಘಾಟನೆ ಮಾಡಿ ಪ್ರತಿಯೊಂದು ಶಾಲೆಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ದಳಗಳು ಇರಬೇಕು ಪ್ರತಿವಾರ ಸ್ಕೌಟ್ಸ್ ಮತ್ತು ಗೈಡ್ಸ್ ಬಗ್ಗೆ ತರಗತಿಗಳನ್ನು ತೆಗೆದುಕೊಳ್ಳಬೇಕು. ತಾಲೂಕು ಮತ್ತು ಜಿಲ್ಲಾ ಮಟ್ಟದ ಚಟುವಟಿಕೆಯಲ್ಲಿ ಪಾಲ್ಗೊಳ್ಳುವಂತೆ ಮಕ್ಕಳಿಗೆ ತರಬೇತಿ ನೀಡಬೇಕೆಂದು ತಿಳಿಸಿದರು.

ಈ ಕಾರ್ಯಕ್ರಮದಲ್ಲಿ ಶ್ರೀಮತಿ ಮಾಧುರಿ ದೇವಧರ, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಎನ್. ಐ. ಇಚ್ಚಂಗಿ, ದೈಹಿಕ ಶಿಕ್ಷಣಾಧಿಕಾರಿಗಳು, ಹಾವೇರಿ, ಶ್ರೀ ಎಂ.ಎಸ್. ಕರ್ಜಗಿ, ಮುಖ್ಯೋಪಾಧ್ಯಾಯರು, ಎನ್.ಪಿಎಸ್. ನಂ.2, ಹಾವೇರಿ, ಮತ್ತು ಜಿಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು. ಈ ಕಾರ್ಯಕ್ರಮದಲ್ಲಿ 45 ಸ್ಕೌಟ್ಸ್ ಮಾಸ್ಟರ ಮತ್ತು 19 ಗೈಡ್ ಕ್ಯಾಪ್ಟನ್ನರು ಭಾಗವಹಿಸಿದ್ದರು.

************

ದಿನಾಂಕ 18-01-2014 / 19-01-2014ರಂದು ಎನ್.ಪಿ.ಎಸ್. ನಂ. 2, ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಕಾರ್ಯಾಲಯ ಹಾವೇರಿಯಲ್ಲಿ ಎರಡು ದಿನದ ಗುಂಪುನಾಯಕರ ತರಬೇತಿ ಮತ್ತು ರಾಜ್ಯಪುರಸ್ಕಾರ ಕಾರ್ಯಾಗಾರ ನಡೆಯಿತು.

ಶ್ರೀಮತಿ ಮಾಧುರಿ ದೇವಧರ, ಜಿಲ್ಲಾ ಮುಖ್ಯ ಆಯುಕ್ತರು, ಜಿಲ್ಲಾ ಸಂಸ್ಥೆ ಹಾವೇರಿ ಇವರು ಉದ್ಘಾಟನೆಯನ್ನು ಮಾಡಿದರು.

ತರಬೇತಿಯಲ್ಲಿ 140 ಸ್ಕೌಟ್‌ಗಳು, 35 ಗೈಡ್‌ಗಳು, 28 ಸ್ಕೌಟ್ಸ್ ಮಾಸ್ಟರ್ ಮತ್ತು 13 ಗೈಡ್ ಕ್ಯಾಪ್ಟನ್ನರು ಭಾಗವಹಿಸಿದ್ದರು. ಶ್ರೀ ಎಂ.ಆರ್. ಪಾಟೀಲ, ಶ್ರೀಮತಿ ಉಮಾ ಮರಿಗೆಂಚಣ್ಣವರ, ಶ್ರೀ ಎ.ಎಲ್. ಶೇಖಸೂರಗಿ ಡಿ.ಓ.ಸಿ.(ಎಸ್.), ಕುಮಾರಿ ಶೃತಿ ಧಾನರೆಡ್ಡಿ ಡಿ.ಓ.(ಜಿ.) ತರಬೇತಿಯನ್ನು ನೀಡಿದರು.

## ರಾಯಚೂರು

. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಅತ್ತೂರು, ಶಾಲೆಯ "ಮಹಾತ್ಮಾ ಗಾಂಧೀಜಿ ಕಬ್ ಪ್ಯಾಕ್" ನ ನೇತೃತ್ವದಲ್ಲಿ 65ನೇ ಗಣರಾಜ್ಯೋತ್ಸವವನ್ನು ಆಚರಿಸಲಾಯಿತು. ಕಬ್ಸ್‌ಗಳ ಮುಂದಾಳತ್ವದಲ್ಲಿ ವಿವಿಧ ಘೋಷಣೆಗಳ ಫಲಕಗಳನ್ನು ಹಿಡಿದು ಪಥಸಂಚಲನ ಕೈಗೊಳ್ಳಲಾಯಿತು. ನಂತರ ಧ್ವಜಾರೋಹಣವನ್ನು ನೆರವೇರಿಸಿ ಕಬ್ಸ್‌ಗಳ ಸಾಮೂಹಿಕವಾಗಿ ದೇಶಭಕ್ತಿ-ಗೀತೆಗಳನ್ನು ಹಾಡಿದರು. ಶಾಲೆಯ ಮಕ್ಕಳಿಗೆ 300 ಪ್ಲೇಟುಗಳನ್ನು ಹಾಗೂ 300 ಲೋಟಗಳನ್ನು ಕೊಳ್ಳಲು ಎಸ್.ಡಿ.ಎಂ.ಸಿ., ಸದಸ್ಯರಾದ ಶ್ರೀ ಶಿವರಾಜಗೌಡ, ಶ್ರೀ ಜಮೀರ್ ಪಾಷ ಶ್ರೀ ಕಾರೆ ಆಂಜಿನೆಯ್ಯ, ಶ್ರೀ ಬ್ರಹ್ಮಯ್ಯ ಬಡಿಗೇರಾ ರವರು ಧನಸಹಾಯವನ್ನು ಮಾಡಿದರು. ಕಬ್ ಮಾಸ್ಟರ್‌ರಾದ ಶ್ರೀ ಚಲುವರಾಜು ಹಾಗೂ ಮುಖ್ಯ ಗುರುಗಳಾದ ಶ್ರೀಮತಿ ಕಮಲಾವತಿಯವರು ಉಪಸ್ಥಿತರಿದ್ದರು.

## ಕೋಲಾರ

ದಿನಾಂಕ 25-01-2014 ರಂದು ಸ.ಪ.ಪೂ. ಕಾಲೇಜು, ಸೋಮಯಾಜಲಹಳ್ಳಿಯಲ್ಲಿ ಶಾಲಾ ವಾರ್ಷಿಕೋತ್ಸವ ಹಾಗೂ ಸೈಕಲ್ ವಿತರಣೆ ಸಮಾರಂಭದಲ್ಲಿ ವಿಧಾನಸಭೆಯ ಮಾಜಿ ಸ್ಪೀಕರ್ ಹಾಗೂ ಕ್ಷೇತ್ರದ ಶಾಸಕರಾದ ಶ್ರೀ ಕೆ.ಆರ್. ರಮೇಶ್ ಕುಮಾರ್ ರವರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಸಂಸ್ಥೆಯ ಗೌರವ ರಾಜ್ಯ ತರಬೇತಿ ಆಯುಕ್ತರಾದ ಶ್ರೀ ಚಿನ್ನಸ್ವಾಮಿ ರೆಡ್ಡಿಯವರು ಹಾಗೂ ಉಪ ಪ್ರಾಂಶುಪಾಲರಾದ ಶ್ರೀಮತಿ ಕೆ.ಎನ್. ಗಾಯತ್ರಿರವರು ಉಪಸ್ಥಿತರಿದ್ದರು.

ಶಾಸಕರಾದ ಶ್ರೀ ರಮೇಶ್ ಕುಮಾರ್ ರವರು ಜ್ಯೋತಿ ಬೆಳಗಿಸುವುದರ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಗೌರವ ರಾಜ್ಯ ತರಬೇತಿ ಆಯುಕ್ತರಾದ ಶ್ರೀ ಚಿನ್ನಸ್ವಾಮಿ ರೆಡ್ಡಿಯವರು ಸಂಸ್ಥೆಯ ಮೂಲತತ್ವಗಳನ್ನು ತಿಳಿಸಿಕೊಡುತ್ತಾ ಶಿಸ್ತನ್ನು ಬೆಳೆಸಿಕೊಂಡು ಸಮಾಜದಲ್ಲಿ ರಚನಾತ್ಮಕ ಪಾತ್ರವನ್ನು ನಿರ್ವಹಿಸಿ ಸಮುದಾಯದ ಅಭಿವೃದ್ಧಿಗೆ ಕಾರಣರಾಗಬೇಕೆಂದು ಕರೆಕೊಟ್ಟರು. ಶಾಲೆಯಲ್ಲಿ 3 ಸ್ಕೌಟ್ ದಳಗಳು ಮತ್ತು 1 ಗೈಡ್ ದಳ ಕಾರ್ಯನಿರ್ವಹಿಸುತ್ತಿರುವುದಕ್ಕೆ ತಮ್ಮ ಮೆಚ್ಚುಗೆಯನ್ನು ಸೂಚಿಸಿದರು.

ಗೈಡ್ ಕ್ಯಾಪ್ಟನ್ ಕು. ಬಿ.ವಿ. ಚಿಕ್ಕರೆಡ್ಡೆಮ್ಮನವರು ಕಾರ್ಯಕ್ರಮವನ್ನು ನಿರೂಪಿಸಿದರು. ಸ್ಕೌಟ್ ಮಾಸ್ಟರ್. ಶ್ರೀ ಟಿ.ಎಂ. ರಾಮಕೃಷ್ಣೇಗೌಡರು ಸ್ವಾಗತಿಸಿದರು. ಸ್ಕೌಟ್ ಮಾಸ್ಟರ್ ಶ್ರೀ ಸಿ.ಕೆ. ಗೋಪಾಲರಾವ್ ರವರು ಶಾಲಾ ವಾರ್ಷಿಕ ವರದಿಯನ್ನು ವಾಚಿಸಿದರು. ಹಿರಿಯ ಸಹಶಿಕ್ಷಕರಾದ ಶ್ರೀ ಎಸ್.ಜೆ. ಸಲೀಮ್ ರವರು ವಂದಿಸಿದರು.

ನಂತರ ಅಪರಾಹ್ನ ವಿದ್ಯಾರ್ಥಿಗಳಿಂದ, ಶಿಕ್ಷಕರಿಂದ, ಕಲಾತಂಡದವರು ಹಾಗೂ ಸ್ಕೌಟ್ ಶಿಕ್ಷಕರಾದ ಶ್ರೀ ವಿ.ಎಂ. ನಾರಾಯಣಸ್ವಾಮಿ, ಶ್ರೀ ಜಿ.ಎನ್. ಶ್ರೀನಿವಾಸಯ್ಯ, ಶ್ರೀ ವಿ.ಎಂ. ರಾಜಣ್ಣನವರಿಂದ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದವು.

## ಬಾಗಲಕೋಟೆ

ದಿನಾಂಕ 28-12-2013 ರಿಂದ 30-12-2013 ರ ವರೆಗೆ ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಎಲ್.ಟಿ. ನಂ. 1 ಮುಚಖಂಡಿ. ಇಲ್ಲಿ ಜಿಲ್ಲಾ ಮಟ್ಟದ ತೃತೀಯ ಸೋಪಾನ ಶಿಬಿರ, ಸಮುದಾಯ ಸೇವಾ ಶಿಬಿರ ಮತ್ತು ಕಬ್

ಸಿಕ್ಸರ್ ಶಿಬಿರವನ್ನು ಜರುಗಿಸಲಾಯಿತು. ಜಿಲ್ಲೆಯ 192 ಸ್ಕೌಟ್ಸ್-ಗೈಡ್ಸ್‌ಗಳು ಹಾಜರಿದ್ದರು. ತೃತೀಯ ಸೋಪಾನ ಶಿಬಿರಕ್ಕೆ ನಾಯಕರಾಗಿ, ಶ್ರೀ ಎಸ್.ಆರ್. ಪಾಟೀಲ, ಮತ್ತು ಶ್ರೀಮತಿ ಪಿ.ಜಿ. ಬಂದಿಕೇರಿ ರವರುಗಳು ಕಾರ್ಯವನ್ನು ನಿರ್ವಹಿಸಿದರು.

ಸಮುದಾಯ ಸೇವಾ ಶಿಬಿರದ ನಾಯಕರಾಗಿ ಶ್ರೀ ಎಸ್.ಎಸ್. ನಾರಾ ಶ್ರೀಮತಿ ಎಸ್.ಎಸ್. ಕಲಾದಗಿ ರವರುಗಳು ಕಾರ್ಯ ನಿರ್ವಹಿಸಿದರು ಹಾಗೂ ಕಬ್ಸ್ ಸಿಕ್ಸರ್ ಶಿಬಿರಕ್ಕೆ ಶ್ರೀ ಎನ್.ಎಂ. ಅಗಸಿ ಮುಂದಿನ ಡಿ.ಟಿ.ಸಿ.,(ಎಸ್.) ರವರು ಕಾರ್ಯನಿರ್ವಹಿಸಿದರು. ಶ್ರೀ ಎ.ಎಂ. ಮಡಿವಾಳರ, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಜಿಲ್ಲಾ ಮುಖ್ಯ ಆಯುಕ್ತರು ಶಿಬಿರವನ್ನು ಉದ್ಘಾಟಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀ ಎ.ಎಸ್. ಭಜಂತ್ರಿ ಜಿಲ್ಲಾ ಅಕ್ಷರ ದಾಸೋಹ ಅಧಿಕಾರಿಗಳು ಆಗಮಿಸಿದ್ದರು. ಜಿಲ್ಲೆಯ ಕಾರ್ಯದರ್ಶಿಗಳು ಶ್ರೀ ಚಂದ್ರಶೇಖರ ಸಾವಳಗಿ ಎಲ್ಲರನ್ನು ಸ್ವಾಗತಿಸಿದರು. ವಂದನಾರ್ಪಣೆಯನ್ನು ಶ್ರೀ ಹೆಚ್.ಬಿ. ಭಜಂತ್ರಿ ರವರು ಮಾಡಿದರು.

***************

ದಿನಾಂಕ 30-01-2014 ರಿಂದ 05-02-2014ರ ವರೆಗೆ ಶ್ರೀ ಹೇಮರೆಡ್ಡಿ ಮಲ್ಲಮ್ಮ, ಮಹಾಯೋಗಿ ವೇಮನ ದೇವಸ್ಥಾನ. ಬೆನಕಟ್ಟಿ ಇಲ್ಲಿ ಶ್ರೀ ಲಾಲ್ ಬಹದ್ದೂರ್ ರೋವರ್ ಘಟಕ, ಶ್ರೀ ಬಸವೇಶ್ವರ ಮಹಾ ವಿದ್ಯಾಲಯ ಬಾಗಲಕೋಟೆ ಹಾಗು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯ ಸಂಯುಕ್ತ ಆಶ್ರಯದಲ್ಲಿ ರೋವರ್ಸ್‌ಗಳಿಗಾಗಿ, ಸಮುದಾಯ ಸೇವಾ ಶಿಬಿರ, ದಂತ ಚಿಕಿತ್ಸಾ ವೈದ್ಯಕೀಯ ಶಿಬಿರ, ಹಾಗೂ ವಿಶೇಷ ತರಬೇತಿ ಶಿಬಿರವನ್ನು ಜರುಗಿಸಲಾಯಿತು. ಶಿಬಿರದ ಉದ್ಘಾಟನೆಯನ್ನು ಜಿಲ್ಲಾ ಕಾರ್ಯದರ್ಶಿಗಳು ಶ್ರೀ ಚಂದ್ರಶೇಖಸರ ಅಂ. ಸಾವಳಿ ರವರು ನೆರವೇರಿಸಿದರು.

ಜಿಲ್ಲೆಯ ಪದಾಧಿಕಾರಿಗಳು, ಕಾಲೇಜಿನ ರೋವರ್ಸ್ ಉಪನ್ಯಾಸಕರಾದ ಶ್ರೀ ಎಂ.ಆರ್. ಇಂಗಳಗಿ ರವರು ಸಹ ಶಿಬಿರವನ್ನು ಉದ್ದೇಶಿಸಿ ಮಾತನಾಡಿದರು. ಕಾಲೇಜಿನ ಪ್ರಾಚಾರ್ಯರಾದ ಶ್ರೀ ಹೆಚ್.ಎಸ್. ಪೂಜಾರಿ ರವರು ತಮ್ಮ ಅನಿಸಿಕೆಗಳನ್ನು ತಿಳಿಸಿದರು. ಶಿಬಿರ ನಾಯಕರಾಗಿ ಶ್ರೀ ಎಸ್.ಎಸ್. ನಾರಾ ರವರು ಕಾರ್ಯ ನಿರ್ವಹಿಸಿದರು. ಶಿಬಿರದಲ್ಲಿ ಕಾಲೇಜಿನ ಎರಡು ರೋವರ್ಸ್ ತಂಡಗಳು ಭಾಗವಹಿಸಿದ್ದರು. ಶಿಬಿರವು ಬೆನಕಟ್ಟಿ ಗ್ರಾಮಸ್ಥರ ಸಹಕಾರದೊಂದಿಗೆ ಜರುಗಿತು.

*************

ದಿನಾಂಕ 26-01-2014 ರಂದು ಗಣರಾಜ್ಯೋತ್ಸವದ ಪ್ರಯುಕ್ತ ಬೆಳಿಗ್ಗೆ 7.30ಕ್ಕೆ ಜಿಲ್ಲಾ ಕೇಂದ್ರ ಕಛೇರಿಯ ಆವರಣದಲ್ಲಿ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಜಿ.ಎನ್. ಪಾಟೀಲ ಧ್ವಜಾರೋಹಣವನ್ನು ನೆರವೇರಿಸಿದರು. ಜಿಲ್ಲೆಯ ಪದಾಧಿಕಾರಿಗಳು, ವಿವಿಧ ಶಾಲೆಗಳ ಸ್ಕೌಟ್ ಗೈಡ್ಸ್ ವಿದ್ಯಾರ್ಥಿಗಳು, ಶಿಕ್ಷಕ-ಶಿಕ್ಷಕಿಯರುಗಳು ಪಾಲುಗೊಂಡಿದ್ದರು. ಜಿಲ್ಲಾ ಆಯುಕ್ತರು (ಸ್ಕೌಟ್), ಶ್ರೀ ಜಿ.ಬಿ. ಇದ್ದಲಗಿ ಎಲ್ಲರನ್ನು ಸ್ವಾಗತಿಸಿದರು. ನಂತರ 9.00 ಗಂಟೆಗೆ ಸರಿಯಾಗಿ ಜಿಲ್ಲಾ ಕ್ರೀಡಾಂಗಣ, ನವನಗರದಲ್ಲಿ ಧ್ವಜಾರೋಹಣ ಕಾರ್ಯಕ್ರಮದಲ್ಲಿ ಜಿಲ್ಲೆಯ ಸ್ಕೌಟ್-ಗೈಡ್, ರೋವರ್ಸ್ ತಂಡಗಳು ಸಂಚಲನದಲ್ಲಿ ಭಾಗವಹಿಸಿ, ಬಾಲಕಿಯ ಸರಕಾರಿ ಪ್ರೌಢಶಾಲೆಯ ಗೈಡ್ಸ್ ತಂಡ, ತೃತೀಯ ಸ್ಥಾನವನ್ನು ಪಡೆದಿದೆ.

## ದಕ್ಷಿಣ ಕನ್ನಡ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಬೆಳ್ತಂಗಡಿ ಹಾಗೂ ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಕೊಯ್ಯೂರು ಕಸಬ ಇವರ ಜಂಟಿ ಆಶ್ರಯದಲ್ಲಿ ಕೊಯ್ಯೂರಿನಲ್ಲಿ ರೋವರ್ಸ್, ರೇಂಜರ್ಸ್ ಸಮಾಗಮ, ಸ್ಕೌಟ್ಸ್-ಗೈಡ್ಸ್ ಮೇಳ, ಹಾಗೂ ಕಬ್ಸ್-ಬುಲ್‌ಬುಲ್ಸ್ ಉತ್ಸವವು ಜರುಗಿತು. ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ವಿಟ್ಟಲ್ ಶೆಟ್ಟಿ ಇವರ ಅಧ್ಯಕ್ಷತೆಯಲ್ಲಿ ನಡೆದ ಸಮಾರಂಭವನ್ನು ಕೊಯ್ಯೂರು ಗ್ರಾಮ ಪಂಚಾಯತ್ ಅಧ್ಯಕ್ಷರಾದ ಶ್ರೀ ದಾಮೋದರ ಗೌಡ ಇವರು ಉದ್ಘಾಟಿಸಿದರು. ಸಮಾರಂಭದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯ ಮುಖ್ಯ ಆಯುಕ್ತರಾದ

ಶ್ರೀ ಎಸ್.ಜಿ. ಮೋಹನ್, ರಾಜ್ಯ ಸಹಾಯಕ ಸಂಘಟನಾ ಆಯುಕ್ತರಾದ ಶ್ರೀ ಪ್ರಭಾಕರ್ ಭಟ್, ಉಪಾಧ್ಯಕ್ಷರಾದ ಶ್ರೀ ಎಂ. ಪ್ರಸನ್ನಕುಮಾರ್, ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿಯ ಅಧ್ಯಕ್ಷರಾದ ಸುಂದರ್, ಬೆಳ್ತಂಗಡಿ ಸಮೂಹ ಸಂಪನ್ಮೂಲ ವ್ಯಕ್ತಿ ಶ್ರೀ ಜಗನ್ನಾತ್, ಸ್ಕೌಟರ್ ಶ್ರೀ ಎಂ.ಜಿ. ಕಜೆ, ಕೊಯ್ಯೂರು ಗ್ರಾಮ ಪಂಚಾಯಿತ್ ಸದಸ್ಯರಾದ ಶ್ರೀ ವಿಶ್ವನಾಥ ಗೌಡ, ಶ್ರೀ ಸಂಜೀವ ಮಲೆಕುಡಿಯ, ಶ್ರೀಮತಿ ಲೀಲಾವತಿ ಹಾಗೂ ಗೀತಾ ರವರು ಭಾಗವಹಿಸಿದ್ದರು. ಸಮಾರಂಭದಲ್ಲಿ ಹಿರಿಯ ಸ್ಕೌಟರ್ ಶ್ರೀ ರಮೇಶ್ ಆಚಾರ್, ಶ್ರೀ ಕೆ. ತಿಮ್ಮಪ್ಪ, ವಾಲ್ಟರ್ ಜೆ. ಪಿಂಟೋ ಹಾಗೂ ಶ್ರೀ ವಸಂತರಾವ್ ಇವರುಗಳನ್ನು ಸನ್ಮಾನಿಸಲಾಯಿತು. ಹಾಗೆ ಸ್ಕೌಟಿಂಗ್-ಗೈಡಿಂಗ್‌ನಲ್ಲಿ ಉನ್ನತ ಶಿಕ್ಷಣವನ್ನು ಪಡೆದ ವೃಕ್ಷಮಣಿಧಾರಕರನ್ನು ಪುರಸ್ಕರಿಸಲಾಯಿತು. ಈ ಸಮಾರಂಭದಲ್ಲಿ ಸುಮಾರು 500ಕ್ಕೂ ಹೆಚ್ಚ ಸ್ಕೌಟ್ಸ್-ಗೈಡ್ಸ್ ಭಾಗವಹಿಸಿದ್ದರು. ಸ್ಕೌಟರ್ ಶ್ರೀ ಚಂದ್ರಶೇಖರ್ ಅತಿಥಿಗಳನ್ನು ಸ್ವಾಗತಿಸಿದರು. ರ್‍ಯಾಲಿ ಸಂಯೋಜಕರಾದ ಶ್ರೀಮತಿ ರಾಜೇಶ್ವರಿ ಪ್ರಾಸ್ತಾವಿಕ ನುಡಿ ನುಡಿದರು,

## ಹಾಸನ

ದಿನಾಂಕ 13-12-2013 ರಂದು ಸರ್ಕಾರಿ ಪದವಿ ಪೂರ್ವ ಕಾಲೇಜು, ಗಂಡಸಿ ಇಲ್ಲಿಯ 'ಸ್ನೇಹ ಗೈಡ್' ಘಟಕದ ವತಿಯಿಂದ ಗೋಪಾಲಸ್ವಾಮಿ ಬೆಟ್ಟಕ್ಕೆ ಏರ್ಪಡಿಸಲಾಗಿದ್ದ ಸೈಕಲ್ ಹೊರಸಂಚಾರವನ್ನು ಗಂಡಸಿ ಹೋಬಳಿ, ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷರಾದ ಶ್ರೀ ತಿಮ್ಮೇಶ್ ಪ್ರಭುರವರು ಹಸಿರು ನಿಶಾನೆ ತೋರಿಸುವುದರೊಂದಿಗೆ ಉದ್ಘಾಟಿಸಿದರು.

ಗೋಪಾಲಸ್ವಾಮಿ ಬೆಟ್ಟದಲ್ಲಿ ಧ್ವಜಾರೋಹಣ, ಸರ್ವಧರ್ಮ ಪ್ರಾರ್ಥನೆ, ಬೆಂಕಿ ಇಲ್ಲದೆ ಅಡುಗೆ ಮಾಡುವುದು, ಪರಿಸರ ಸ್ವಚ್ಛತೆ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಲಾಯಿತು. ಸಹಾಯಕ ಜಿಲ್ಲಾ ಆಯುಕ್ತರಾದ ಶ್ರೀ ವಿಷ್ಣುಮೂರ್ತಿ ಭಟ್, ಜಿಲ್ಲಾ ಸಂಘಟಕರಾದ ಶ್ರೀ ದೇವರಾಜ್, ಪ್ರಭಾರಿ ಮುಖ್ಯ ಶಿಕ್ಷಕಿ ಶ್ರೀಮತಿ ಶಶಿಕಲಾ ಹಾಗೂ ಶಿಕ್ಷಕ ವೃಂದದವರು ಮತ್ತು ಸ್ಥಳೀಯರು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು. ಗೈಡ್ ಕ್ಯಾಪ್ಟನ್ ಶ್ರೀಮತಿ ಕಾಮೇಶ್ವರಿ ಬಿ. ಇವರು ಕಾರ್ಯಕ್ರಮ ಸಂಘಟಿಸಿದರು.

************

ದಿನಾಂಕ 19-01-2014 ರಂದು ನಡೆದ ರಾಷ್ಟ್ರೀಯ ಪಲ್ಸ್ ಪೋಲಿಯೋ ಕಾರ್ಯಕ್ರಮದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಹಾಸನದ ವತಿಯಿಂದ 10 ರೋವರ್ಸ್‌ಗಳು ಸ್ವಯಂ ಸೇವಕರಾಗಿ ಸೇವೆ ಸಲ್ಲಿಸಿರುತ್ತಾರೆ.

## ದಾವಣಗೆರೆ

ದಿನಾಂಕ 30-01-2014 ರಿಂದ 31-01-2014 ರ ವರೆಗೆ ಹರಿಹರ ತಾಲ್ಲೂಕ್ ಮಟ್ಟದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರ್‍ಯಾಲಿಯನ್ನು ಹರಿಹರ ನಗರದ ಅಂಬೇಡ್ಕರ್ ಶಾಲಾ ಆವರಣದಲ್ಲಿ ಹಮ್ಮಿಕೊಳ್ಳಲಾಗಿತ್ತು. ಮೊದಲನೇ ದಿವಸ ಸಂಜೆ ಶಿಬಿರಾಗ್ನಿ ಕಾರ್ಯಕ್ರಮದ ಉದ್ಘಾಟನೆಯನ್ನು ಬಾಪೂಜಿ ಶಾಲೆಯ ಮುಖ್ಯ ಶಿಕ್ಷಕರಾದ ಶ್ರೀ ಹೆಚ್.ಎಸ್. ಚನ್ನಬಸಪ್ಪ ನೆರವೇರಿಸಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಬಿ. ಜಯದೇವಪ್ಪ ವಹಿಸಿದ್ದರು. ಎರಡನೆಯ ದಿನ ಬೆಳಿಗ್ಗೆ 7.00 ಗಂಟೆಗೆ ಸರಿಯಾಗಿ ಸರ್ವಧರ್ಮ ಪ್ರಾರ್ಥನೆ ನಡೆಸಲಾಯಿತು. 7.45ಕ್ಕೆ ಧ್ವಜಾರೋಹಣ ನಂತರ ನಗರದ ಪ್ರಮುಖ ಬೀದಿಗಳಲ್ಲಿ ರಾಷ್ಟ್ರೀಯ ಭಾವೈಕ್ಯತೆಯ ಸಂದೇಶ ಸಾರುವ ಪಥಸಂಚಲನೆಯನ್ನು ನಡೆಸಲಾಯಿತು. ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಕೆ.ಸಿ. ಮಲ್ಲಿಕಾರ್ಜುನ, ಹರಿಹರ ವಿಧಾನ ಸಭಾ ಕ್ಷೇತ್ರ ಕಾಂಗ್ರೆಸ್ ಮುಖಂಡರಾದ ಶ್ರೀ ಎಸ್. ರಾಮಪ್ಪ, ರಾಜ್ಯ ಮುಖ್ಯ ಆಯುಕ್ತ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ರವರು ಪಥಸಂಚಲನೆಯಲ್ಲಿ ಭಾಗವಹಿಸಿದ್ದರು. ಇದೇ ಸಂದರ್ಭದಲ್ಲಿ ರಾಜ್ಯೋತ್ಸವ ಪ್ರಶಸ್ತಿ ಪಡೆದ ರಾಜ್ಯ ಮುಖ್ಯ ಆಯುಕ್ತರನ್ನು ಸನ್ಮಾನಿಸಲಾಯಿತು. ನಂತರ ಮಧ್ಯಾಹ್ನ 2.30ಕ್ಕೆ ಸರಿಯಾಗಿ ಸಮಾರೋಪ ಸಮಾರಂಭವನ್ನು ಜಿಲ್ಲಾ ಸ್ಥಾನಿಕ ಆಯುಕ್ತರಾದ ಶ್ರೀ ಬಿ. ಜಯದೇವಪ್ಪನವರ ಅಧ್ಯಕ್ಷತೆಯಲ್ಲಿ ನಡೆಸಲಾಯಿತು. ಮುಖ್ಯ ಅತಿಥಿಗಳಾಗಿ ಶ್ರೀ ಕೆ.ಸಿ. ಮಲ್ಲಿಕಾರ್ಜುನ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ನಗರ ಸಭಾ ಸದಸ್ಯರಾದ ಶ್ರೀಮತಿ ಮಂಜುಳಾ, ಶ್ರೀಮತಿ ಷಹಾಜಾದ್, ಶ್ರೀ ಸನಾವುಲ್ಲಾ ಶ್ರೀ ವಸಂತ ಎಸ್.ಎಂ.ಜಿ. ಸುರೇಶಗೌಡ, ಶ್ರೀ ಉಚ್ಚೇಶ ಡಿ. ಭಾಗವಹಿಸಿದ್ದರು.

# ಯಾದಗಿರಿ

ಸ್ವಾಮಿ ವಿವೇಕಾನಂದರು ಜನಸಾಮಾನ್ಯರ, ಬಡವರ ಬಗ್ಗೆ ಕಾಳಜಿ ಹೊಂದಿದ್ದರು. ಅದಕ್ಕಿಂತ ಮುಖ್ಯವಾಗಿ ಮಾನವೀಯತೆಯ ಪ್ರತಿಪಾದಕರಾಗಿದ್ದರು ಎಂದು ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಕೆ. ಪ್ರಭು ಕಣ್ಣನ್ ಹೇಳಿದರು.

ನಗರದ ಕ್ಷೇರ ಶಿಕ್ಷಣಾಧಿಕಾರಿಗಳ ಕಾರ್ಯಾಲಯದಲ್ಲಿ ಸ್ವಾಮಿ ವಿವೇಕಾನಂದರ 150ನೇ ಜಯಂತ್ಯುತ್ಸವದ ನಿಮಿತ್ತ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಅವರು ಮಾತನಾಡುತ್ತಿದ್ದರು.

ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಕಾರ್ಯದರ್ಶಿ ಶ್ರೀ ಸಿ.ಎಂ. ಪಟ್ಟೇದಾರ ಮಾತನಾಡಿ, ಸ್ವಾಮಿ ವಿವೇಕಾನಂದರ ಜೀವನ ಮೌಲ್ಯಗಳು ಹಾಗೂ ಸಂದೇಶಗಳು ನಮ್ಮೆಲ್ಲರಿಗೆ ಅನುಕರಣೀಯವಾಗಿವೆ. ಅವುಗಳ ಪೈಕಿ ಕೆಲವನ್ನಾದರೂ ನಮ್ಮ ಯುವಜನತೆ ಜೀವನದಲ್ಲಿ ಮೈಗೂಡಿಸಿಕೊಂಡರೆ ಸ್ವಾಮಿ ವಿವೇಕಾನಂದರಿಗೆ ಗೌರವ ಸಲ್ಲಿಸಿದಂತಾಗುತ್ತದೆ. ಎಂದು ಹೇಳಿದರು.

ಕಾರ್ಯಕ್ರಮದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಚಾಲಕ ಶ್ರೀ ರಾಘವೇಂದ್ರ, ದೈಹಿಕ ಶಿಕ್ಷಣಾಧಿಕಾರಿ, ಶ್ರೀ ಶಮಕರ ಸೋನಾರ್, ಶಿಕ್ಷಕ ಶ್ರೀ ಹಣಮಯ್ಯ ಕಲಾಲ, ಕ್ಷೇತ್ರ ಶಿಕ್ಷಣಾಧಿಕಾರಿ ಕಾರ್ಯಾಲಯದ ಸಿಬ್ಬಂದಿ ಶ್ರೀ ಎಂ.ಎಚ್. ಜೋಷಿ,, ತಿಪ್ಪಣ್ಣ ಸೇರಿದಂತೆ ಮತ್ತಿತರರು ಇದ್ದರು.

******************

ದೇಶದ ಗಡಿ ಭಾಗವನ್ನು ಸೈನಿಕರು ರಕ್ಷಿಸುತ್ತಾರೆ ಹಾಗೆಯೇ ದೇಶದ ಆಂತರಿಕ ಸೈನಿಕರು ಸ್ಕೌಟ್ಸ್ ಮತ್ತು ಗೈಡ್ಸ್‌ರಾಗಿರುತ್ತಾರೆಂದು ಸ್ಕೌಟ್ಸ್ ಮತ್ತು ಗೈಡ್ಸ್‌ನ ಜಿಲ್ಲಾ ಕಾರ್ಯದರ್ಶಿಗಳು ಆಗಿರುವ ಶ್ರೀ ಸಿ.ಎಂ. ಪಟ್ಟೇದಾರ ಮಾತನಾಡಿದರು.

ಚಿರಂಜೀವಿ ಪ್ರೌಢ ಶಾಲೆಯ ಸಭಾಂಗಣದಲ್ಲಿ ದಿನಾಂಕ 06-02-2014 ರಂದು ನಡೆದ ಜಿಲ್ಲಾ ಮಟ್ಟದ ಸ್ಕೌಟ್ಸ್ ಮತ್ತು ಗೈಡ್ಸ್ ಸಮಾವೇಶದಲ್ಲಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಮಾತನಾಡುತ್ತಿದ್ದರು.

ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ ತರಬೇತಿ ಆಯುಕ್ತರಾದ ಶ್ರೀಮತಿ ಸುಲೋಚನಾ ಬೆಂಜಮಿನ್ ಮಾತನಾಡಿ ಇಂದಿನ ಸಮಾಜದಲ್ಲಿ ಕೊಲೆ, ಸುಲಿಗೆ ಡಕಾಯಿತಿ, ಅತ್ಯಾಚಾರ ಮುಂತಾದ ಸಮಾಜ ಘಾಟುಕ ಚಟುವಟಿಕೆಗಳು ಬೆಳೆದಿರುವುದಕ್ಕೆ ದೇಶಾಭಿಮಾನದ ಕೊರತೆ ಕಂಡು ಬರುತ್ತದೆ. ಯುವಕರಲ್ಲಿ ದೇಶಾಭಿಮಾನ ಬೆಳೆಸುವ ನಿಟ್ಟಿನಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ನ ಪಾತ್ರ ಮಹತ್ವದ್ದು ಎಂದರು. ಪ್ರತಿ ಶಾಲೆಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ನ ಘಟಕಗಳು ಆರಂಭವಾಗಲಿ ಎಂದು ಮುಖ್ಯ ಅತಿಥಿಯಾಗಿ ಭಾಗವಹಿಸಿದ ಶ್ರೀಮತಿ ನಾಗರತ್ನ ಅನಪೂರ ಡಿ.ಸಿ.(ಜಿ.) ನುಡಿದರು.

ಕಾರ್ಯಕ್ರಮದಲ್ಲಿ ಅಧ್ಯಕ್ಷತೆ ವಹಿಸಿದ ಚಿರಂಜೀವಿ ಪ್ರೌಢಶಾಲೆ ಪ್ರಾಂಶುಪಾಲರಾದ ಶ್ರೀಮತಿ ಮ್ಯಾಥು ಮೇರಿ ಮಾರ್ಗರೇಟ್ ಮಾತನಾಡಿ. ಯಾದಗಿರಿಯ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯು ಪ್ರಜಾರಾಜ್ಯೋತ್ಸವ ಹಾಗೂ ಸ್ವಾತಂತ್ರ್ಯೋತ್ಸವ ಮುಂತಾದ ಕಾರ್ಯಕ್ರಮಗಳ ಪಥಸಂಚಲನದಲ್ಲಿ ಪಾಲ್ಗೊಂಡು ತನ್ನ ಶಿಸ್ತು ಹಾಗೂ ದೇಶ ಪ್ರೇಮವನ್ನು ಮೂಡಿಸುವಲ್ಲಿ ಯಶಸ್ವಿಯಾಗಿದೆ ಎಂದರು

ಇದೇ ಸಂದರ್ಭದಲ್ಲಿ ರಾಯಚೂರು ಜಿಲ್ಲೆಯ ಮಾನವಿಯಲ್ಲಿ ನಡೆದ ರಾಜ್ಯಮಟ್ಟದ ಕಬ್ ಬುಲ್ ಬುಲ್ ಉತ್ಸವದಲ್ಲಿ ಯಾದಗಿರಿ ತಾಲೂಕಿನ ಮುಂಡರಗಿ ಹಿರಿಯ ಪ್ರಾಥಮಿಕ ಶಾಲೆ ಮಕ್ಕಳು ಭಾಗವಹಿಸಿದ ನಿಮಿತ್ತವಾಗಿ ಅವರಿಗೆ ಪದಕ ಮತ್ತು ಪ್ರಮಾಣ ಪತ್ರ ನೀಡಿ ಸನ್ಮಾನಿಸಲಾಯಿತು.

ಕಾರ್ಯಕ್ರಮವನ್ನು ಜಿಲ್ಲಾ ಆರೋಗ್ಯ ಮತ್ತು ಸ್ಥಾಯಿ ಸಮಿತಿ ಅಧ್ಯಕ್ಷರಾದ ಶ್ರೀ ಭೀಮರಾಯ ಹಯ್ಯಾಳಪ್ಪನೋರ ಉದ್ಘಾಟಿಸಿದರು. ತಾಲೂಕ ದೈಹಿಕ ಶಿಕ್ಷಣಾಧಿಕಾರಿ ಶ್ರೀ ಶಂಕರ ಸೋನಾರ, ರಾಯಚೂರ ಜಿಲ್ಲಾ ಸಂಘಟನಾ ಆಯುಕ್ತ ಶ್ರೀರಾವುತ ರಾವ್, ಯಾದಗಿರಿ ಜಿಲ್ಲಾ ಸಂಘಟನಾ ಆಯುಕ್ತ ಶ್ರೀ ರಾಘವೇಂದ್ರ ಅನಿಲ ಕುಮಾರ ಉಪಸ್ಥಿತರಿದ್ದರು. ಜಿಲ್ಲೆಯ 140ಕ್ಕೂ ಹೆಚ್ಚು ಸ್ಕೌಟ್ಸ್ ಮತ್ತು ಗೈಡ್ಸ್ ಪಾಲ್ಗೊಂಡಿದ್ದರು.

## ತುಮಕೂರು

ದಿನಾಂಕ 30-01-2014 ರಂದು ಸರ್ಕಾರಿ ಪದವಿ ಪೂರ್ವ ಕಾಲೇಜು, ಕೊರಟಗೆರೆಯಲ್ಲಿ ತಹಸೀಲ್ದಾರ್ ರವರ ಅಧ್ಯಕ್ಷತೆಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್, ಕಬ್ಸ್ ಹಾಗು ಬುಲ್ ಬುಲ್ಸ್ ರ್‍ಯಾಲಿಯನ್ನು ಆಚರಿಸಲಾಯಿತು. ತಹಸೀಲ್ದಾರ್ ರವರು ಧ್ವಜಾರೋಹಣ ಮಾಡುವುದರ ಮೂಲಕ ರ್‍ಯಾಲಿಯನ್ನು ಉದ್ಘಾಟಿಸಿದರು. ನಂತರ ನಗರ ಬೀದಿಗಳಲ್ಲಿ ಮೆರವಣಿಗೆ ಮಾಡಲಾಯಿತು. ಸಾಹಸ ಚಟುವಟಿಕೆಗಳು, ಗೆಳೆತನ ಆಟ, ರಂಗೋಲಿ ಸ್ಪರ್ಧೆ, ಗಾಳಿಪಟಸ್ಪರ್ಧೆ, ಮಾದರಿ ತಯಾರಿಕೆ ಮುಂತಾದ ಸ್ಪರ್ಧೆಗಳನ್ನು ಏರ್ಪಡಿಸಲಾಗಿತ್ತು. ತಾಲ್ಲೂಕಿನ ವಿವಿಧ ಶಾಲೆಗಳಿಂದ 500 ಸ್ಕೌಟ್ಸ್ ಮತ್ತು ಗೈಡ್ಸ್, ಕಬ್ಸ್ ಬುಲ್ ಬುಲ್ ಮೇಳದಲ್ಲಿ ಭಾಗವಹಿಸಿದ್ದರು. ತಹಸೀಲ್ದಾರ್, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಅಧ್ಯಕ್ಷರು ಹಾಗು ಕಾರ್ಯದರ್ಶಿಗಳನ್ನು ಸನ್ಮಾನಿಸಲಾಯಿತು.

***********

ದಿನಾಂಕ 07-01-2014 ರಂದು ತಿಪಟೂರು ತಾಲ್ಲೂಕ್ ರ್‍ಯಾಲಿಯನ್ನು ನಡೆಸಲಾಯಿತು. ಶ್ರೀ ನಂದಕುಮಾರ್, ಸ್ಥಳೀಯ ಸಂಸ್ಥೆ ಅಧ್ಯಕ್ಷರು, ರ್‍ಯಾಲಿಯ ಅಧ್ಯಕ್ಷತೆ ವಹಿಸಿದ್ದರು. ಜಿಲ್ಲಾ ಪಂಚಾಯತ್ ಸದಸ್ಯರು ತಾ.ಪ. ಸದಸ್ಯರು ಗ್ರಾ.ಪಂ. ಸದಸ್ಯರು ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ಹಾಗೂ ಜಿಲ್ಲಾ ಸಂಸ್ಥೆ ಯಿಂದ ಜಿಲ್ಲಾ ತರಬೇತಿ ಆಯುಕ್ತರು ಹಾಗೂ ಜಿಲ್ಲಾ ಸಂಘಟಕರು ಭಾಗವಹಿಸಿದ್ದರು. ಈ ರ್‍ಯಾಲಿಯಲ್ಲಿ 380 ಸ್ಕೌಟ್ಸ್ ಮತ್ತು ಗೈಡ್ಸ್ ಭಾಗವಹಿಸಿದ್ದರು.

************

ದಿನಾಂಕ 19-01-2014 ರಂದು ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಪಲ್ಸ್ ಪೋಲಿಯೋ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

************

ದಿನಾಂಕ 20-01-2014 ರಂದು ಪೊಲೀಸ್ ಇಲಾಖೆಯ ವತಿಯಿಂದ ಸಂಚಾರ ಸಂಕೇತಗಳ ಮಾಹಿತಿ ಕಾರ್ಯಾಗಾರದಲ್ಲಿ ಸುಮಾರು 200 ಸ್ಕೌಟ್ಸ್-ಗೈಡ್ಸ್‌ಗಳು ಮಾಹಿತಿ ಪಡೆದರು. ಜಿಲ್ಲಾ ಸಂಸ್ಥೆ ವತಿಯಿಂದ ಜಿಲ್ಲಾ ಆಯುಕ್ತರು ಸ್ಕೌಟ್ಸ್, ಡಿ.ಓ., ಡಿ.ಟಿ.ಸಿ., ಹಾಗೂ ಶಿಕ್ಷಕ-ಶಿಕ್ಷಕಿಯರು ಭಾಗವಹಿಸಿದ್ದರು.

************

ದಿನಾಂಕ 22-01-2014 ರಂದು "ಬನ್ನಿ" ಮಕ್ಕಳ ಕಾರ್ಯಕ್ರಮವನ್ನು ನಗರದ ಸೇಂಟ್ ಮೇರಿ ಶಾಲೆಯಲ್ಲಿ ನಡೆಸಲಾಯಿತು. ಈ ಕಾರ್ಯಕ್ರಮದಲ್ಲಿ ಜಿಲ್ಲಾ ಆಯುಕ್ತರು ಗೈಡ್ ಶ್ರೀಮತಿ ಶುಭಾಷಿಣಿ ಆರ್. ಕುಮಾರ್ ರವರು ಭಾಗವಹಿಸಿದ್ದರು. ಹಾಗೂ ಡಿ.ಓ., ಶ್ರೀ ಕರಿಸಿದ್ಧಪ್ಪ, ಬನ್ನೀಸ್ ಶಿಕ್ಷಕಿಯರು ಮತ್ತು ಬನ್ನಿಸ್‌ಗಳು ಭಾಗವಹಿಸಿದ್ದರು.

***********

ದಿನಾಂಕ 08-01-2014 ರಿಂದ 09-01-2014 ರ ವರೆಗೆ ಶ್ರೀ ಸಿದ್ಧಗಂಗಾ ಮಠದಲ್ಲಿ ಪ್ರಾವೀಣ್ಯತಾ ಪದಕಗಳ ಪೂರ್ವ ತಯಾರಿ ಶಿಬಿರವನ್ನು ನಡೆಸಲಾಯಿತು. ಈ ತರಬೇತಿ ಶಿಬಿರದಲ್ಲಿ 380 ಸ್ಕೌಟ್ಸ್-ಗೈಡ್ಸ್ ಗಳು ಭಾಗವಹಿಸಿದ್ದರು. ಡಿ.ಟಿ.ಸಿ.,(ಎಸ್.)(ಜಿ.), ಡಿ.ಓ., ತರಬೇತಿ ಕೌನ್ಸಿಲರ್‌ಗಳು ಹಾಗೂ 8 ಸ್ಕೌಟರ್-ಗೈಡರ್ಸ್ ಭಾಗವಹಿಸಿದ್ದರು.

## ಗದಗ

ದಿನಾಂಕ 22-01-2014 ರಂದು ಬಸವೇಶ್ವರ ಮತ್ತು ಏಕಲವ್ಯ ಸ್ಕೌಟ್ ಟ್ರೂಪ್‌ಗಳ ಉದ್ಘಾಟನಾ ಕಾರ್ಯಕ್ರಮ ಜರುಗಿತು. ಈ ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಶ್ರೀ ಅಪ್ಪಣ್ಣ ಅ. ಇನಾಮತಿ ಅಧ್ಯಕ್ಷರು ಗ್ರಾಮ ಪಂಚಾಯತ ಕುರ್ತಕೋಟಿ ಶ್ರೀ ಎಸ್.ಆರ್. ಹೂಗಾರ, ಬಿ.ಇ.ಓ., ಗದಗ ಗ್ರಾಮೀಣ ವಲಯ ಶ್ರೀ ವಿ.ವಿ. ನಡುವಿನಮನಿ, ಕ್ಷೇತ್ರ ಸಮನ್ವಯಾಧಿಕಾರಿಗಳು ಗದಗ, ಗ್ರಾಮೀಣ ವಲಯ, ಶ್ರೀ ಶಿವಣ್ಣ ಕುರಿ ಅಧ್ಯಕ್ಷರು ಕನ್ನಡ ಸಾಹಿತ್ಯ ಪರಿಷತ್ ಜಿಲ್ಲಾ ಘಟಕ ಗದಗ, ಶ್ರೀ ಗುರಿಕಾರ ಅಧ್ಯಕ್ಷರು ಕ.ಸಾ.ಪ. ತಾಲೂಕು ಘಟಕರೋಣ ಶ್ರೀ ಮಲ್ಲೇಶಪ್ಪ, ಕೆ.ಬಿ. ಜಿಲ್ಲಾ ಸಂಘಟಕರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಜಿಲ್ಲಾ ಘಟಕ ಗದಗ, ಶ್ರೀ ಎಸ್.ಎನ್. ಬಳ್ಳಾರಿ ಅಧ್ಯಕ್ಷರು ಕ.ರಾ.ಪ್ರಾ.ಶಾ.ಶಿ. ಸಂಘ ಜಿಲ್ಲಾ ಘಟಕ ಗದಗ, ಶ್ರೀ ಡಿ.ಎಸ್. ತಳವಾರ ಅಧ್ಯಕ್ಷರು ಕ.ರಾ.ಪ್ರಾ.ಶಾ.ಶಿ. ಸಂಘ ತಾಲುಕ

ಘಟಕ ಗದಗ ಗ್ರಾಮೀಣ ಆಗಮಿಸಿದ್ದರು. ಶ್ರೀ ಬೂದಪ್ಪಕುರಿ ಅಧ್ಯಕ್ಷರು ಎಸ್.ಡಿ.ಎಂ.ಸಿ. ಸ.ಹಿ.ಪ್ರಾ.ಶಾಲೆ ಹೊಸಹಳ್ಳಿ ಇವರ ಅಧ್ಯಕ್ಷತೆಯಲ್ಲಿ ಪ್ರಾರ್ಥನೆ, ಧ್ವಜಾರೋಹಣ ಜರುಗಿತು. ನಂತರ ಉಭಯ ದಳಗಳನ್ನು ಶ್ರೀ ಅಪ್ಪಣ್ಣ ಇನಾಮತಿ ಇವರು ಜ್ಯೋತಿ ಬೆಳಗಿಸುವ ಮೂಲಕ ಉದ್ಘಾಟಿಸಿದರು. ಶ್ರೀ ಅಪ್ಪಣ್ಣ ಇನಾಮತಿಯವರು ಸ್ಕೌಟ್‌ಗಳಿಗೆ ಸಮವಸ್ತ್ರಕ್ಕಾಗಿ ರೂ. 10,000 ಗಳ ದೇಣಿಗೆ ಕೊಡುವುದಾಗಿ ಘೋಷಿಸಿದರು. ಅದೇ ರೀತಿಯಾಗಿ ಶ್ರೀ ಗುರಿಕಾರವರು ಸ್ಕೌಟ್‌ನ ಚಟುವಟಿಕೆಗಾಗಿ ರೂ. 10,000 ಗಳ ದೇಣಿಗೆ ಕೊಡುವುದಾಗಿ ಘೋಷಿಸಿದರು. ಈ ಕಾರ್ಯಕ್ರಮದಲ್ಲಿ ಎಸ್.ಡಿ.ಎಂ.ಸಿ.ಯ ಸರ್ವಸದಸ್ಯರು, ಗ್ರಾಮ ಪಂಚಾಯತ ಸದಸ್ಯರು ಗ್ರಾಮದ ಗುರು–ಹಿರಿಯರು, ಶಾಲೆಯ ಗುರುವೃಂದ ಹಾಗೂ ಸ್ಕೌಟ್ ಮಾಸ್ಟರ್‌ಗಳಾದ ಶ್ರೀ ಡಿ.ಎಸ್. ತಳವಾರ ಮತ್ತು ಶ್ರೀ ಉಮೇಶ ತಳವಾರ ಶಿಕ್ಷಕರು ಭಾಗವಹಿಸಿದ್ದರು. ಕಾರ್ಯಕ್ರಮವನ್ನು ಶ್ರೀ ಡಿ.ಎಸ್.ತಳವಾರ ಸ್ಕೌಟ್ ಮಾಸ್ಟರ್ ನಿರೂಪಿಸಿದರು. ಪ್ರಧಾನ ಗುರುಗಳಾದ ಶ್ರೀ ಎಸ್.ಎಂ. ಹೆಬಸೂರ ರವರು ವಂದನಾರ್ಪಣೆ ಸಲ್ಲಿಸಿದರು.

## ಉಡುಪಿ

ದಿನಾಂಕ 17–01–2014 ರಿಂದ 18–01–2014 ರ ವರೆಗೆ ಜಿಲ್ಲಾ ಸಂಸ್ಥೆಯ ವತಿಯಿಂದ ಉಡುಪಿ ಶ್ರೀ ಕೃಷ್ಣ ಮಠದ ಐತಿಹಾಸಿಕ ಪರ್ಯಾಯ ಮಹೋತ್ಸವದಲ್ಲಿ ರೋವರ್ಸ್ – ರೇಂಜರ್ಸ್‌ಗಳ ಸೇವಾ ಶಿಬಿರವನ್ನು ಸಂಘಟಿಸಲಾಗಿತ್ತು.

ಈ ಸೇವಾ ಶಿಬಿರದಲ್ಲಿ ಉಡುಪಿ ಮತ್ತು ದ.ಕ. ಜಿಲ್ಲೆಯ ವಿವಿಧ ಕಾಲೇಜುಗಳಿಂದ ಸುಮಾರು 200 ರೋವರ್ಸ್–ರೇಂಜರ್ಸ್ ಹಾಗೂ ನಾಂಗುಕ–ನಾಯಕಿಯರು ಸ್ವಯಂಸೇವಕರಾಗಿ ಭಾಗವಹಿಸಿದ್ದರು. ಸೇವಾ ಶಿಬಿರದ ಮಾರ್ಗದರ್ಶಕರಾಗಿ ಶ್ರೀ ರಾಜ್‌ಗೋಪಾಲ್ ಆಚಾರ್ಯ ಹಾಗೂ ಶಿಬಿರ ನಾಯಕರಾಗಿ ಶ್ರೀ ವಿಕ್ರಂ ಸಿಂಗ್ ಸಹಕರಿಸಿದರು.

***********

ಪ್ರಾದೇಶಿಕ ಸಾರಿಗೆ ಇಲಾಖೆಯ ವತಿಯಿಂದ ದಿನಾಂಕ 21–01–2014 ರಿಂದ 27–01–2014 ರ ವರೆಗೆ 25ನೇ ರಸ್ತೆ ಸುರಕ್ಷತಾ ಸಪ್ತಾಹದ ಅಂಗವಾಗಿ ದಿನಾಂಕ : 25–01–2014 ರಂದು ಪೂರ್ವಾಹ್ನ ಉಡುಪಿ ಸರ್ವಿಸ್ ಬಸ್ಸು ನಿಲ್ದಾಣ (ಬೋರ್ಡ್ ಹೈಸ್ಕೂಲ್) ದಿಂದ ತಾಲೂಕು ಕಛೇರಿ/ ಅಜ್ಜರಕಾಡು ವರೆಗೆ ವಾಕಥಾನ್ ಕಾರ್ಯಕ್ರಮವನ್ನು ಸಂಘಟಿಸಲಾಗಿತ್ತು.

ಈ ಕಾರ್ಯಕ್ರಮವನ್ನು ಉಡುಪಿ ಜಿಲ್ಲಾ ನಗರಾಭಿವೃದ್ಧಿ ಮತ್ತು ಉಸ್ತುವಾರಿ ಸಚಿವರಾದ ಶ್ರೀ ವಿನಯ್ ಕುಮಾರ್ ಸೊರಕೆ ಉದ್ಘಾಟಿಸಿದರು. ಜಿ. ಪಂ. ಅಧ್ಯಕ್ಷ ಶ್ರೀ ಉಪೇಂದ್ರ ನಾಯಕ್, ನಗರ ಸಭೆ ಅಧ್ಯಕ್ಷ ಶ್ರೀ ಯುವರಾಜ್, ಉಪಾಧ್ಯಕ್ಷೆ ಶ್ರೀಮತಿ ಅಮೃತ ಕೃಷ್ಣಮೂರ್ತಿ, ಜಿಲ್ಲಾಧಿಕಾರಿ ಡಾ. ಎಂ.ಟಿ. ರೇಜು, ಎಸ್ಪಿ ಡಾ. ಬೋರಲಿಂಗಯ್ಯ, ಬಸ್ ಮಾಲಿಕರ ಸಂಘದ ಶ್ರೀ ರಾಜವರ್ಮ ಬಲ್ಲಾಳ್, ಶ್ರೀ ಸುರೇಶ್ ನಾಯಕ್ ಕುಯಿಲಾಡಿ, ಶ್ರೀ ಅರುಣ್ ಕುಮಾರ್, ನಿತ್ಯಾನಂದ ಉಪಸ್ಥಿತರಿದ್ದರು.

ವಿವಿಧ ಶಲೆಗಳಿಂದ ಸುಮಾರು 150 ರೋವರ್ಸ್–ರೇಂಜರ್ಸ್, ಸ್ಕೌಟ್ಸ್–ಗೈಡ್ಸ್‌ಗಳು ಭಾಗವಹಿಸಿದ್ದರು. ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಕೆ.ಬಿ. ರಾವ್, ಉಪಸ್ಥಿತರಿದ್ದರು.

**************

ದಿನಾಂಕ 31–01–2014 ರಂದು ಬೈಂದೂರು ಸ್ಥಳೀಯ ಮಟ್ಟದ ರ್‍ಯಾಲಿಯು ಸಂದೀಪನ್ ಆಂಗ್ಲ ಮಾಧ್ಯಮ ಶಾಲೆ, ಕಿರಿಮಂಜೇಶ್ವರ, ಕುಂದಾಪುರ ಇಲ್ಲಿ ನಡೆಯಿತು.

ಕಾರ್ಯಕ್ರಮದ ಉದ್ಘಾಟನಾ ಸಮಾರಂಭವು ಶ್ರೀ ರಾಜು ದೇವಾಡಿಗ ಇವರ ಅಧ್ಯಕ್ಷತೆಯಲ್ಲಿ ನಡೆಯಿತು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ. ಬಾಲಕೃಷ್ಣರಾವರ ಉದ್ಘಾಟಿಸಿದರು. ಶ್ರೀ ವಿಶ್ವೇಶ್ವರ ಅಡಿಗ, ಪ್ರಾಂಶುಪಾಲರು, ಸಂದೀಪನ್ ಆಂಗ್ಲ ಮಾಧ್ಯಮ ಶಾಲೆ, ಎಲ್ಲರನ್ನು ಸ್ವಾಗತಿಸಿದರು. ಶ್ರೀ ಕೊಗ್ಗ ಗಾಣಿಗ, ಜಿಲಾ ತರಬೇತಿ ಆಯುಕ್ತರು ಶ್ರೀ ಎಂ. ಪ್ರಭಾಕರ್ ಭಟ್ ಸಹಾಯಕ ರಾಜ್ಯ ಸಂಘಟಕರು. ಶ್ರೀ ನಿತಿನ್ ಅಮಿನ್, ಜಿಲ್ಲಾ ಸಂಘಟಕ ಉಪಸ್ಥಿತರಿದ್ದರು.

ನಂತರ ಸ್ಕೌಟ್ಸ್–ಗೈಡ್ಸ್‌ಗಳು ಸ್ಪ್ರೇ ಪೈಂಟಿಂಗ್, ಮುಖವಾಡ ತಯಾರಿಕೆ, ರಂಗೋಲಿ, ಗ್ರೀಟಿಂಗ್ ಕಾರ್ಡ್

ತಯಾರಿ, ರಸಪ್ರಶ್ನೆ, ಮೆಹಂದಿ, ಬೆಂಕಿ ಇಲ್ಲದೆ ತಿಂಡಿ ತಯಾರಿ, ಚಿತ್ರಕಲೆ ಮೊದಲಾದ ಚಟುವಟಿಕೆಗಳನ್ನು ಏರ್ಪಡಿಸಲಾಯಿತು.

ಸುಮಾರು 300 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

## ಬಿಜಾಪುರ

ದಿನಾಂಕ 17-01-2014 ರಂದು ನಗರದ ವಿದ್ಯಾದೀಪ ಪಬ್ಲಿಕ್ ಶಾಲೆಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ದಳ ಪ್ರಾರಂಭಿಸಲಾಯಿತು. ನಗರ ಸಭೆಯ ಸದಸ್ಯರಾದ ಶ್ರೀ ರವಿ ಲೋಣಿ ಅವರು ದೀಪ ಬೆಳಗಿಸುವುದರ ಮೂಲ ಉದ್ಘಾಟಿಸಿ ಮಾತನಾಡಿ ಸ್ಕೌಟ್ಸ್ ಮತ್ತು ಗೈಡ್ಸ್‌ನಲ್ಲಿ ಉದಾತ್ತ ಮತ್ತು ಉತ್ತಮ ಗುಣಗಳು ಇರುವುದರಿಂದ ಇದರಲ್ಲಿ ಪ್ರತಿಯೊಬ್ಬರು ಸೇರುವದು ಒಳಿತು ಹಾಗು ಶಿಸ್ತಿನ ಸಿಪಾಯಿಗಳಾಗಿ ಈ ನಾಡ ಕಟ್ಟಲು ಇದು ಉತ್ತಮ ಸಹಕಾರಿಯಾಗಿದೆ. ಎಂದರು.

ಶ್ರೀ ಸಿದ್ಧೇಶ್ವರ ಬ್ಯಾಂಕಿನ ನಿರ್ದೇಶಕರಾದ ಶ್ರೀ ರಮೇಶ್ ಬಿದ್ನೂರ ಮುಖ್ಯ ಅತಿಥಿಗಳಾಗಿ ಮಾತನಾಡಿ ನಾನೂ ಕೂಡ ಸ್ಕೌಟ್ಸ್ ಆಗಿ ರಾಷ್ಟ್ರಪತಿ ಪುರಸ್ಕಾರ ಪಡೆದು ಕೊಂಡಿದ್ದರಿಂದಲೆ ನಾನು ಪ್ರತಿಯೊಂದು ಕ್ಷೇತ್ರದಲ್ಲ ಧೈರ್ಯದಿಂದ ಮುನ್ನುಗ್ಗಿ ಯಶಸ್ವಿ ಪಡೆಯುತ್ತಿದ್ದೇನೆ ಎಂದರು.

ಸಂಸ್ಥೆಯ ಕಾರ್ಯದರ್ಶಿ ಶ್ರೀ ಚಿಕ್ಕಮಠ ಅವರು ಅಧ್ಯಕ್ಷತೆ ವಹಿಸಿದ್ದರು. ಶಾಲೆಯ ಮುಖ್ಯ ಗುರುಗಳಾದ ಶ್ರೀಮತಿ ಚಿಕ್ಕಮಠ ಮುಖ್ಯ ಅತಿಥಿಗಳಾಗಿದ್ದರು. ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಜಗದೀಶ ಬೋಳಸೂರ, ಶ್ರೀ ಸುನೀಲ ಬಿರಾದಾರ ಪಾಟೀಲ, ಶ್ರೀಮತಿ ಸರಸ್ವತಿ ಶಿಂಧೆ ಅವರು ಮಾರ್ಗದರ್ಶನ ಮಾಡಿದರು. ಗೈಡ್ಸ್ ಕ್ಯಾಪ್ಟನ್ ಶ್ರೀಮತಿ ರೇಖಾ ಬಳೂತಿ ನೇತೃತ್ವ ವಹಿಸಿಕೊಂಡಿದ್ದರು.

***********

ದಿನಾಂಕ 16-01-2014 ರಿಂದ 20-01-2014 ರ ವರೆಗೆ ಇಂಡಿ ತಾಲೂಕಾ ಗೊಳಸಾರ ಗ್ರಾಮದಲ್ಲಿ ಪರಮ ಪೂಜ್ಯ ಪುಂಡಲಿಕ ಮಹಾರಾಜರ ನೇತೃತ್ವದಲ್ಲಿ ಸುಮಾರ 80 ಜೋಡಿ ಸಾಮೂಹಿಕ ವಿವಾಹದಲ್ಲಿ ಊಟ-ಉಪಹಾರ ಮತ್ತು ಶಿಸ್ತು ಪಾಲನೆ ಹಾಗೂ ಕುಂಬ ಮೇಳದ ಸಂಪೂರ್ಣ ಜವಾಬ್ದಾರಿಯನ್ನು ಇಂಡಿ ರೋವರ್ಸ್ ಸ್ಕೌಟ್ಸ್‌ಗಳು ಸಂಪೂರ್ಣ ಜವಾಬ್ದಾರಿ ವಹಿಸಿಕೊಂಡಿದ್ದರು.

ಜಿ.ಆರ್.ಜಿ. ಆರ್ಟ್ಸ್ ಮತ್ತು ವೈ.ಎ.ಪಿ. ಕಾಮರ್ಸ್ ಕಾಲೇಜಿನ ರೋವರ್ಸ್ ಲೀಡರ್ ಶ್ರೀ ಎಸ್.ಎಸ್. ಪಾಟೀಲ ಅವರ ನೇತೃತ್ವದಲ್ಲಿ 24 ರೋವರ್ಸ್‌ಗಳು ಸೇವೆ ನೀಡಿದ್ದರು. ಇಂಡಿ ಶಾಸಕರಾದ ಶ್ರೀ ಯಸವಂತ್ರಾಗೌಡ ಪಾಟೀಲ ಅವರು ರೋವರ್‌ಗಳನ್ನು ಸನ್ಮಾನಿಸಿದರು.

************

ದಿನಾಂಕ 08-02-2014 ರಿಂದ 09-02-2014 ರ ವರೆಗೆ ಪದ್ಮಾವತಿ ದೇವಸ್ಥಾನ ಮುದ್ದೇಬಿಹಾಳದಲ್ಲಿ ಎರಡು ದಿವಸದ ಜಿಲ್ಲಾ ಮಟ್ಟದ ಪದಕ ತರಬೇತಿಯನ್ನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಮುದ್ದೇಬಿಹಾಳ ಹಾಗೂ ಜಿಲ್ಲಾ ಸಂಸ್ಥೆ ವಿಜಾಪುರ ಇವರ ಸಹಯೋಗದಲ್ಲಿ ಹಮ್ಮಿಕೊಳ್ಳಲಾಗಿತ್ತು.

ಶಿಬಿರದ ನಾಯಕರಾದ ಶ್ರೀ ಐ.ಕೆ. ದಳವಾಯಿ ಅವರು ಶಿಬಿರ ಉದ್ಘಾಟಿಸಿದರು. ಶ್ರೀ ಜಿ.ಎನ್. ಹೂಗಾರ, ಶ್ರೀ ಎಲ್.ಕೆ. ನದಾಫ್, ಶ್ರೀ ಬಿ.ಎಸ್. ಬಂಗಾರಿ, ಉಪಸ್ಥಿತರಿದ್ದರು. 250 ಸ್ಕೌಟ್ಸ್ ಮತ್ತು 150 ಗೈಡ್ಸ್‌ಗಳು ಪದಕ ತರಬೇತಿಯಲ್ಲಿ ಪಾಲ್ಗೊಂಡಿದ್ದರು.

ಸಮಾರೋಪ ಸಮಾರಂಭದಲ್ಲಿ ಮುದ್ದೇಬಿಹಾಳ ತಾಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಜೆ.ಟಿ. ತಳಕೇರಿ ಅವರು ಉಪಸ್ಥಿತರಿದ್ದರು. ಅವರು ಮಾತನಾಡಿ ಸ್ಕೌಟ್ಸ್-ಗೈಡ್ಸ್‌ಗಳಿಗೆ ಪದಕ ತರಬೇತಿ

ನೀಡುವುದರಿಂದ ಸ್ಕೌಟ್ಸ್-ಗೈಡ್ಸ್‌ನ ಬಗ್ಗೆ ಹೆಚ್ಚು ತಿಳುವಳಿಕೆ ಮೂಡುವುದು ಮತ್ತು ರಾಜ್ಯ ಪುರಸ್ಕಾರ ಹಾಗೂ ರಾಷ್ಟ್ರಪತಿ ಪುರಸ್ಕಾರ ಪರೀಕ್ಷೆಯನ್ನು ಧೈರ್ಯದಿಂದ ಎದುರಿಸಲು ಸಾಧ್ಯವಾಗುವುದು ಎಂದು ಹೇಳಿದರು. ತಾಲೂಕ ದೈಹಿಕ ಶಿಕ್ಷಣಾಧಿಕಾರಿಗಳಾದ ಶ್ರೀ ಎಸ್.ಬಿ. ಚಲುವಾದಿ, ಉಪಾಧ್ಯಕ್ಷೆಯರಾದ ಶ್ರೀ ಡಿ.ಬಿ. ವಡವಡಗಿ, ಬಸವರಾಜ ನಂದಿಕೇಶ್ವರ ಮಠ, ಪದ್ಮಾವತಿ ದೇವಸ್ಥಾನದ ಗುರೂಜಿಯವರು, ರೋವರ್ಸ್ ಲೀಡರ್ ಶ್ರೀ ಎಸ್.ಎಸ್. ಹೂಗಾರ, ಶ್ರೀಮತಿ ಎಸ್.ಜಿ. ಮುತ್ತಪ್ಪನವರು ಉಪಸ್ಥಿತರಿದ್ದರು.

## ಚಿಕ್ಕಬಳ್ಳಾಪುರ

ದಿನಾಂಕ 24-01-2014 ರಂದು ಚಿಕ್ಕಬಳ್ಳಾಪುರದ ಪಂಚಗಿರಿ ಬೋಧನಾ ಪ್ರೌಢಶಾಲೆಯಲ್ಲಿ ನೂತನ ಸ್ಕೌಟ್-ಗೈಡ್‌ಗಳನ್ನು ಉದ್ಘಾಟಿಸಲಾಯಿತು. ಶ್ರೀ ಎನ್. ಶ್ರೀನಿವಾಸನ್, ಎಲ್.ಟಿ.(ಸ್ಕೌ) ಸ್ಥಾನಿಕ ಆಯುಕ್ತರು (ಪ್ರಕಟಣೆಗಳು), ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಹಾಗೂ ಚಿಕ್ಕಬಳ್ಳಾಪುರ ಜಿಲ್ಲಾ ಸಂಯೋಜಕರು ದಳಗಳನ್ನು ಉದ್ಘಾಟಿಸಿ ಮಾತನಾಡುತ್ತಾ ಅಭಿಮನ್ಯುವಿನಂತೆ ಧೈರ್ಯ ಹಾಗೂ ಏಕಲವ್ಯನಂತೆ ಗುರುಭಕ್ತಿ ಬೆಳೆಸಿಕೊಳ್ಳಲು ಕರೆನೀಡಿದರು. ಪ್ರೌಢಶಾಲೆಯ ಮುಖ್ಯ ಶಿಕ್ಷಕಿ ಶ್ರೀಮತಿ ಉಷಾ ಮಕರಂದಂ, ಪ್ರಾಸ್ತಾವಿಕವಾಗಿ ಮಾತನಾಡುತ್ತಾ ಸ್ಕೌಟ್-ಗೈಡ್ ಘಟಕಗಳನ್ನು ಪ್ರಾರಂಭಿಸಬೇಕೆಂಬ ತಮ್ಮ ಬಹುದಿನದ ಕನಸು ಇಂದು ನನಸಾಗುತ್ತಿದೆ ಎಂದು ನುಡಿದರು. ಈ ಸಂದರ್ಭದ ಸವಿನೆನಪಿಗಾಗಿ ಶಾಲೆ ಆವರಣದಲ್ಲಿ ಒಂದು ಗಿಡ ನೆಡಲಾಯಿತು.

ಶ್ರೀ ಕೆ.ವಿ. ಟ್ರಸ್ಟ್‌ನ ಅಧ್ಯಕ್ಷರಾದ ಶ್ರಿ ನವೀನ್ ಕಿರಣ್‌ರವರು ಅಧ್ಯಕ್ಷತೆ ವಹಿಸಿ ಮಾಡುತ್ತಾ ಸ್ಕೌಟ್ ಮತ್ತು ಗೈಡ್ ಚಟುವಟಿಕೆಗಳಲ್ಲಿ ಹೆಚ್ಚು ಭಾಗವಹಿಸಿ ಉತ್ತಮ ನಾಗರಿಕರಾಗಲು ಕರೆ ನೀಡಿದರು.

ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಲಕ್ಷ್ಮೀನಾರಾಯಣ ಗುಪ್ತ ಜಿಲ್ಲಾ ಸಂಘಟಕ ಶ್ರೀ ಜಿ. ವಿಶ್ವನಾಥ್ ಹಾಗೂ ಸಾಲ ಸಿಬ್ಬದಿ ಉಪಸ್ಥಿತರಿದ್ದರು ಸ್ಕೌಟ್ ಮಾಸ್ಟರ್ ಶ್ರೀ ಜಯಶಂಕರ್, ಗೈಡ್ ಕ್ಯಾಪ್ಟನ್ ಶ್ರೀಮತಿ ಜಿ. ನಾಗಮ್ಮ ಕಾರ್ಯಕ್ರಮದ ನೇತೃತ್ವ ವಹಿಸಿದ್ದರು.

## ಧಾರವಾಡ

ದಿನಾಂಕ 05-02-2014 ರ ಬುಧವಾರ ಓರಿಯಂಟಲ್ ಪಬ್ಲಿಕ್ ಸ್ಕೂಲ್ ಗೋಕುಲ್ ರಸ್ತೆ ಹುಬ್ಬಳ್ಳಿಯಲ್ಲಿ ಮೇಳದ ಸ್ಕೌಟ್-ಗೈಡ್ ಉದ್ಘಾಟನೆ, ಹಾಗೂ ಪಥಸಂಲಚನೆಯನ್ನು ಶ್ರೀ ಪ್ರಕಾಶ್ ಕ್ಯಾರಕಟ್ಟಿ, ಕಾರ್ಪೋರೇಟರ್, ಹು.ಧಾಮ. ನಗರ ಪಾಲಿಕೆ ಇವರು ನೆರವೇರಿಸಿದರು.

ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಎಂ.ಎಂ. ಲೋಂಡೆ, ಜಿಲ್ಲಾ ಮುಖ್ಯ ಆಯುಕ್ತರು ಭಾರತ್ ಸ್ಕೌಟ್-ಗೈಡ್ ಜಿಲ್ಲಾ ಸಂಸ್ಥೆ-ಧಾರವಾಡ ವಹಿಸಿದ್ದರು. ಶ್ರೀ ಎಂ.ಪಿ. ಅಂಗಡಿ, ಮುಖ್ಯಸ್ಥರು, ರೈಫಲ್ ಸಂಸ್ಥೆ, ಹುಬ್ಬಳ್ಳಿ, ಶ್ರೀ ಶ್ರೀನಿವಾಸ ಜೋಶಿ, ಡೆ. ಕಮಿಷನರ್ ಆಪ್ ಪೊಲೀಸ್ ಹುಬ್ಬಳ್ಳಿ, ಶ್ರೀ ಉಮೇಶ ಬಮ್ಮಕ್ಕನವರ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಹುಬ್ಬಳ್ಳಿ ಶಹರ ವಲಯ, ಶ್ರೀ ನಾರಾಯಣ ಬದ್ದಿ, ಅಧ್ಯಕ್ಷರು, ಕ.ರಾ. ಪ್ರೌಢಶಾಲಾ ಶಿ. ಸಂಘ, ಹುಬ್ಬಳ್ಳಿ, ಶ್ರೀ ಎಂ.ಜೆ. ಅಂಗಡಿ ದೈಹಿಕ ಶಿಕ್ಷಣಾಧಿಕಾರಿಗಳು, ಹುಬ್ಬಳ್ಳಿ, ಶ್ರೀ ಕೃಷ್ಣ ಜೆ.ಕೆ. ನಗರದ ಪ್ರತಿಷ್ಠ ಉದ್ಯಮಿ ಹಾಗೂ ಶಾಲಾ ಕಾರ್ಯದರ್ಶಿಗಳು, ಶ್ರೀಮತಿ ಪ್ರೇಮಾ ಮಂಗಳೂರ, ಜಿಲ್ಲಾ ತರಬೇತಿ ಆಯುಕ್ತರು, (ಗೈಡ್ಸ್) ಶ್ರೀಮತಿ ರಾಜೇಶ್ವರಿ ಕೃಷ್ಣ, ಪ್ರಾಚಾರ್ಯರು, ಓರಿಯಂಟಲ್ ಪಬ್ಲಿಕ್ ಸ್ಕೂಲ್, ಹುಬ್ಬಳ್ಳಿ ಶ್ರೀಮತಿ ಗಾಯತ್ರಿ ಜೋಶಿ, ಸಂಗೀತ ಶಿಕ್ಷಕಿಯರು, ಶ್ರೀಮತಿ ಸರೋಜಾ ಪಾಟಿಲ್ ಶಿಕ್ಷಣ ಸಂಯೋಜಕರು, ಹುಬ್ಬಳ್ಳಿ, ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ನಗರದ 18 ಶಾಲೆಗಳಿಂದ ಸುಮಾರು 500 ಸ್ಕೌಟ್ಸ್-ಗೈಡ್ಸ್‌ಗಳು ಈ ಮೇಳದಲ್ಲಿ ಭಾಗವಹಿಸಿದ್ದರು.

ಶ್ರೀ ಎಂ.ಎಂ. ಲೋಂಡೆಯವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ವಿಶ್ವವ್ಯಾಪ್ತಿ ಸ್ಕೌಟ್ಸ್-ಗೈಡ್ಸ್ ಚಳುವಳಿಯ ಇತಿಹಾಸ, ಪ್ರತಿಜ್ಞೆ ಹಾಗೂ ನಿಯಮ ತತ್ವಗಳ ಮುಖ್ಯ ಅಂಶಗಳನ್ನು ವಿಸ್ತಾರವಾಗಿ ನುಡಿದರು. 'ಇಸ್ಕಾನ್' ಸಂಸ್ಥೆಯವರು ಮುಂಜಾನೆಯ ಉಪಹಾರ ಹಾಗೂ ಮಧ್ಯಾಹ್ನದ ಊಟದ ವ್ಯವಸ್ಥೆ ಮಾಡಿದ್ದರು. ಓರಿಯಂಟಲ್ ಪಬ್ಲಿಕ್ ಸ್ಕೂಲಿನ ಕಾರ್ಯದರ್ಶಿಗಳಾದ ಶ್ರೀ ಕೃಷ್ಣ ಜೆ.ಕೆ., ಪ್ರಾಚಾರ್ಯರಾದ ಶ್ರೀಮತಿ ರಾಜೇಶ್ವರಿ ಕೃಷ್ಣ ಹಾಗೂ ಶಾಲಾ ಸಮಿತಿ ಸಿಬ್ಬಂದಿವರ್ಗ, ಎಲ್ಲರೂ ಸದರಿ ಮೇಳದ ಪೂರ್ಣ ಜವಾಬ್ದಾರಿ, ಅಚ್ಚುಕಟ್ಟಿನ ವ್ಯವಸ್ಥೆಯನ್ನು ನಿಭಾಯಿಸಿದರು. ಮೇಳದ ಸವಿನೆನಪಿಗಾಗಿ ಪ್ರಶಸ್ತಿ ಪತ್ರಗಳು, ಪಾರಿತೋಷಕಗಳು ಹಾಗೂ ಕಂಠವಸ್ತ್ರಗಳನ್ನು ನೀಡಲಾಯಿತು.

ದೇಶಭಕ್ತಿಗೀತೆ, ಕರಕುಶಲಪ್ರದರ್ಶನ, ಸಾಹಸಮಯ ಆಟಗಳು ಹಾಗೂ ಗಂಟುಗಳು ಮುಂತಾದ ಚಟುವಟಿಕೆಗಳನ್ನು ಏರ್ಪಡಿಸಲಾಗಿತ್ತು. ಮುಕ್ತಾಯ ಸಮಾರಂಭದಲ್ಲಿ ಶಿಕ್ಷಣಾಧಿಕಾರಿಗಳಾದ ಶ್ರೀ ಉಮೇಶ್ ಬಮ್ಮಕ್ಕನವರ ಮೇಳದ ಆತಿಥ್ಯವನ್ನು ನೀಡಿದ ಓರಿಯಂಟಲ್ ಪಬ್ಲಿಕ್ ಸ್ಕೂಲಿನ ಪದಾಧಿಕಾರಿಗಳಿಗೆ ಹಾಗೂ ವ್ಯವಸ್ಥಾಪಕದಳದವರಿಗೆ ಹಾಗೂ ಸ್ಕೌಟ್ಸ್-ಗೈಡ್ಸ್‌ಗಳಿಗೆ ಶುಭ ಹಾರೈಸಿ ಅಭಿನಂದನೆ ಸಲ್ಲಿಸಿದರು.

## ಕೊಪ್ಪಳ

ದಿನಾಂಕ 26-01-2014 ರಂದು ನಡೆದ ಗಣರಾಜ್ಯೋತ್ಸವದ ಕಾರ್ಯಕ್ರಮದಲ್ಲಿ ಭಾಗವಹಿಸಲಾಯಿತು. ಸರಕಾರಿ ಗಾಂಧಿ ಸ್ಮಾರಕ ಹಿರಿಯ ಪ್ರಾಥಮಿಕ ಶಾಲೆಯ ಗೈಡ್ಸ್‌ಗಳು ದ್ವಿತೀಯ ಬಹುಮಾನವನ್ನು ಪಡೆದಿರುತ್ತಾರೆ. ಶ್ರೀ ಸತೀಶ ಸ್ಕೌಟ್ ಮಾಸ್ಟರ್, ಶ್ರೀ ಜಯರಾಜ ಬೂಸದ ಸಹಕಾರ್ಯದರ್ಶಿ ಹಾಗೂ ಶ್ರೀ ಎ.ಎಸ್. ಶಿವುಕುಮಾರ ಸಹಾಯಕ ರಾಜ್ಯ ಸಂಘಟನಾ ಆಯುಕ್ತರು ಭಾಗವಹಿಸಿದ್ದರು.

************

ದಿನಾಂಕ 21-01-2014 ರಂದು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯದಲ್ಲಿ ಶಿವಶರಣ ಶ್ರೀ ಅಂಬಿಗರ ಚೌಡಯ್ಯ ರವರ ಜಯಂತಿಯಲ್ಲಿ ಸ್ಕೌಟ್ಸ್‌ಗಳು ಭಾಗವಹಿಸಿದ್ದರು. ಇದರ ಅಧ್ಯಕ್ಷತೆಯನ್ನು ಶ್ರೀ ಉಮೇಶ ಎಂ. ಪೂಜಾರ, ಕ್ಷೇತ್ರ ಶಿಕ್ಷಣಾಧಿಕಾರಿಗಳು ವಹಿಸಿದ್ದರು.

************

ದಿನಾಂಕ 29-01-2014 ರಂದು ಒಂದು ದಿನದ ಪರಿಚಯಾತ್ಮಕ ಶಿಬಿರವನ್ನು ಶಾಸಕರ ಮಾದರಿ ಹಿರಿಯ ಪ್ರಾಥಮಿಕ ಶಾಲೆ, ಯಲಬುರ್ಗಾದಲ್ಲಿ ನಡೆಸಲಾಯಿತು. ಇದರ ನಾಯಕರಾಗಿ ಶ್ರೀ ಜಯರಾಜ ಬೂಸದ ಹಾಗೂ ಸಹಾಯಕರಾಗಿ ಶ್ರೀ ಎ.ಎಸ್. ಶಿವುಕುಮಾರ, ಎ.ಎಸ್.ಓ.ಸಿ., ವಹಿಸಿದ್ದರು.

************

ದಿನಾಂಕ 31-01-2014 ರಿಂದ 02-02-2014 ರ ವರೆಗೆ ಬಾಗ್ಯ ನಗರದಲ್ಲಿ ಜಿಲ್ಲಾ ರ್‍ಯಾಲಿಯ ಉದ್ಘಾಟನೆಯನ್ನು ಶ್ರೀ ಜನಾರ್ಧನ ಹುಲಗಿ, ಜಿಲ್ಲಾ ಪಂಚಾಯತ ಅಧ್ಯಕ್ಷರು ನೆರವೇರಿಸಿದರು. ಪಥಸಂಚಲನವನ್ನು ಕೊಂಡಜ್ಜಿ. ಬ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು, ಬೆಂಗಳೂರು ಹಾಗೂ ಶ್ರೀ ಜಿ.ಹೆಚ್. ವೀರಣ್ಣ ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ ಕೊಪ್ಪಳ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಚಿತ್ರಕಲಾ ಸ್ಪರ್ಧೆಯನ್ನು ನಡೆಸಲಾಗಿತ್ತು. ಸರ್ವಧರ್ಮ ಪ್ರಾರ್ಥನೆಯನ್ನು ನಡೆಸಲಾಯಿತು. ಈ ರ್‍ಯಾಲಿಯಲ್ಲಿ ಕೊಪ್ಪಳ ಜಿಲ್ಲೆಯ ಎಲ್ಲಾ ಸ್ಕೌಟ್ಸ್-ಗೈಡ್ಸ್‌ಗಳು ಹಾಗೂ ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು, 4 ಸ್ಥಳೀಯ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು.

************

ಗಂಗಾವತಿ ತಾಲ್ಲೂಕು ಕನಕಗಿರಿಯ ಕನಕಾಚಲಪತಿ ದೇವಾಲಯದ ಆವರಣದಲ್ಲಿ ವಿವಿಧ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು ಸ್ವಚ್ಛತಾ ಶ್ರಮದಾನ ಮಾಡಿದರು. ದಾಸೋಹ ಭವನ, ಉಗ್ರಾಣ ಕೊಠಡಿ, ಪರಿಸರದಲ್ಲಿ ಬೆಳೆದಿದ್ದ ಕಸಕಡ್ಡಿಗಳನ್ನು ಕಿತ್ತು ಹಾಕುವುದರ ಜೊತೆಗೆ ಬರುವ ಭಕ್ತರಿಗೆ ನಡೆದಾಡಲು ತೊಂದರೆಯಾಗಿದ್ದ ಕಲ್ಲುಗಳನ್ನು ಬೇರೆಡೆಗೆ ಸಾಗಿಸಿದರು. ನೌಕರರ ಸಂಘದ ನಿರ್ದೇಶಕ ಶ್ರೀ ಮಧುಸೂದನ, ಅರ್ಚಕ ಶ್ರೀ ದುರಗಪ್ಪ ಶ್ರೀ ಗೂಲಗೇರಪ್ಪ, ಶ್ರೀ ಶೇಖರಣ್ಣ, ಶ್ರೀಮತಿ ಮಂಜುಳಾ, ಶಿಕ್ಷಕರಾದ ಶ್ರೀ ಸುಬ್ರಹ್ಮಣ್ಯ, ಶ್ರೀಮತಿ ಪುಷ್ಪಾವತಿ, ನಾಗರತ್ನ, ನಾಗ್ಮಾ ಪರ್ವೀನ ಹಾಗೂ ಸ್ಕೌಟ್ ಮಾಸ್ಟರ್, ಗೈಡ್ ಕ್ಯಾಪ್ಟನ್ ಭಾಗವಹಿಸಿದ್ದರು.

## ಮೈಸೂರು

ದಿನಾಂಕ 18-01-2014 ರಂದು ಸಿ.ಎಫ್.ಟಿ.ಆರ್.ಐ. ಶಾಲೆಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಅಡುಗೆ ಮಾಡುವ ಸ್ಪರ್ಧೆ ಏರ್ಪಡಿಸಲಾಗಿತ್ತು. ಈ ಸ್ಪರ್ಧೆಗೆ ಪರೀಕ್ಷಕರಾಗಿ ಶ್ರೀ ರಾಮಪ್ರಸಾದ್ ಡಿ.ಓ.ಸಿ., ಮತ್ತು ಶ್ರೀ ಆರ್.ಪಿ. ಚಂದ್ರು ಭಾಗವಹಿಸಿದ್ದರು.

************

ದಿನಾಂಕ 18 ಮತ್ತು 19 ಜನವರಿ 2014 ರಂದು ಕೆ.ಪಿ. ಶಾಲೆಯ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ 2 ದಿನಗಳ ಶಿಬಿರ ಏರ್ಪಡಿಸಲಾಗಿತ್ತು. ದಿನಾಂಕ 18-01-2014 ರಂದು ಸಂಜೆ ನಡೆದ ಭವ್ಯ ಶಿಬಿರಾಗ್ನಿ ಕಾರ್ಯಕ್ರಮಕ್ಕೆ ಶ್ರೀ ಪಿ. ವಿಶ್ವನಾಥ್, ಡಿ.ಸಿ.ಸಿ., ಡಾ. ಕೆ.ಬಿ. ಗುರುಮೂರ್ತಿ ಜಿಲ್ಲಾ ಕಾರ್ಯದರ್ಶಿಗಳು ಶ್ರೀ ಅಜಯಕುಮಾರ್ ಜೈನ್ ಹಾಗೂ ಶ್ರೀ ರಾಮಪ್ರಸಾದ್ ಡಿ.ಓ.ಸಿ., ಶ್ರೀ ಆರ್.ಪಿ. ಚಂದ್ರು ಅವರು ಭಾಗವಹಿಸಿದ್ದರು. ಶ್ರೀ ಗುಂಡಪ್ಪಗೌಡ ವಿದ್ಯಾಸಂಸ್ಥೆಯ ಅಧ್ಯಕ್ಷರು ಸಭೆಯ ಅಧ್ಯಕ್ಷತೆ ವಹಿಸಿದ್ದರು.

************

ದಿನಾಂಕ 26-01-2014 ರಂದು ಮೈಸೂರಿನ ಓವೆಲ್ ಮೈದಾನದಲ್ಲಿ ನಡೆದ ಗಣರಾಜ್ಯೋತ್ಸವ ಪಥಸಂಚಲನದಲ್ಲಿ ಗುಡ್ ಷಪರ್ಡ್ ಶಾಲೆಯ ಸ್ಕೌಟ್ ಮತ್ತು ಗೈಡ್‌ಗಳು ಭಾಗವಹಿಸಿದ್ದರು.

ದಿನಾಂಕ 01-02-2014 ರಿಂದ 02-02-2014 ರವರೆಗೆ ಗುಡ್ ಷಪರ್ಡ್ ಶಾಲೆಯ ಸ್ಕೌಟ್ ಮತ್ತು ಗೈಡ್‌ಗಳಿಗೆ 2 ದಿನಗಳ ಶಿಬಿರ ನಡೆಯಿತು. ಮೊದಲನೆಯ ದಿನ ಸಂಜೆ ನಡೆದ ಭವ್ಯ ಶಿಬಿರಾಗ್ನಿ ಕಾರ್ಯಕ್ರಮದಲ್ಲಿ ಶ್ರೀ ಸುರೇಶ್ ಕುಮಾರ್, ಎ.ಡಿ.ಸಿ.(ಸ್ಕೌ) ಶ್ರೀ ರಾಮಪ್ರಸಾದ್ ಡಿ.ಓ.ಸಿ., ಮತ್ತು ಶ್ರೀ ಆರ್.ಪಿ. ಚಂದ್ರು ಭಾಗವಹಿಸಿದ್ದರು.

************

ದಿನಾಂಕ 06-02-2014 ರಂದು ಸ್ಕೌಟರ್ಸ್-ಗೈಡರ್ಸ್ ಮಾಸಿಕ ಸಭೆ ನಡೆಯಿತು. ಡಾ. ಕೆ.ಬಿ. ಗುರುಮೂರ್ತಿ, ಜಿಲ್ಲಾ ಕಾರ್ಯದರ್ಶಿಗಳು, ಶ್ರೀ ರಾಮಪ್ರಸಾದ್, ಶ್ರೀ ಅಶೋಕ್ ಕುಮಾರ್, ಶ್ರೀ ಆರ್.ಪಿ. ಚಂದ್ರು, ಶ್ರೀ ಎಂ.ವಿ. ಸುರೇಶ್ ಕುಮಾರ್ ಹಾಗೂ ಸ್ಕೌಟ್ಸ್, ಗೈಡ್ಸ್ ಭಾಗವಹಿಸಿದ್ದರು.

ದಿನಾಂಕ 15-02-2014 ರಂದು ಜಿಲ್ಲಾ ಮಟ್ಟದ ಕಬ್. ಬುಲ್‌ಬುಲ್, ಸ್ಕೌಟ್, ಗೈಡ್ ರ‍್ಯಾಲಿ ನೆರವೇರಿತು. 297 ಕಬ್ಸ್, 245 ಬುಲ್‌ಬುಲ್ಸ್, 716 ಸ್ಕೌಟ್ಸ್, 390 ಗೈಡ್ಸ್, 40 ರೋವರ್ಸ್ 115 ರೇಂಜರ್ಸ್

ಮತ್ತು 120 ಸ್ಕೌಟರ್ಸ್–ಗೈಡರ್ಸ್ ಭಾಗವಹಿಸಿದ್ದರು. ಶ್ರೀ ವಾಸು, ಮಾನ್ಯ ಶಾಸಕರು ರ್‍ಯಾಲಿಯನ್ನು ಉದ್ಘಾಟಿಸಿದರು. ಶ್ರೀ ಪಿ. ವಿಶ್ವನಾಥ್ ಡಿ.ಸಿ.ಸಿ., ಅಧ್ಯಕ್ಷತೆ ವಹಿಸಿದ್ದರು. ಕಬ್ಸ್ ಮತ್ತು ಬುಲ್ ಬುಲ್‌ಗಳಿಗೆ ಘನವಂದನೆ ನೀಡಲಾಯಿತು. ನಂತರ ಮಾತನಾಡಿದ ಶ್ರೀ ಪಿ. ವಾಸುರವರು ಶಿಸ್ತು, ಸಂಯಮ ಬೆಳೆಸುವಂತಹ ಇಂತಹ ಸಂಸ್ಥೆಗೆ ಹೆಚ್ಚಿನ ಸಂಖ್ಯೆಯಲ್ಲಿ ಸ್ಕೌಟ್ಸ್–ಗೈಡ್ಸ್‌ಗೆ ಸೇರುವಂತೆ ತಿಳಿಸಿದರು. ಶ್ರೀ ಅಬ್ದುಲ್ ಜಮೀಲ್ ಡಿ.ಸಿ.(ಎಸ್) ಸ್ವಾಗತ ಕೋರಿದರು. ಡಾ. ಕೆ.ಬಿ. ಗುರುಮೂರ್ತಿ ಜಿಲ್ಲಾ ಕಾರ್ಯದರ್ಶಿಗಳು ವಂದನಾರ್ಪಣೆ ಮಾಡಿದರು. ಡಾ. ರತ್ನ ಅರಸ್ ಎ.ಎಸ್.ಸಿ.(ಗೈ) ಡಾ. ಕಮಲಾ ರಾಮನ್ ಡಿ.ಸಿ.(ಜಿ.) ಶ್ರೀ ಸುರೇಶ್ ಕುಮಾರ್ ಎ.ಡಿ.ಸಿ.(ಎಸ್.) ಶ್ರೀ ಅಜಯ್ ಕುಮಾರ್ ಜೈನ್ ಎ.ಡಿ.ಸಿ.(ಎಸ್.) ಡಾ. ಹೆಚ್.ಎಂ. ನಾಗರಾಜ್, ಶ್ರೀಮತಿ ಸುಜಯ, ಶ್ರೀ ಮಹದೇವಯ್ಯ ಉಪಸ್ಥಿತರಿದ್ದರು.

ಕಬ್ಸ್‌ಗಳಿಗೆ ಧ್ವಜವಂದನೆ, ಗ್ರೀಟಿಂಗ್ ಕಾರ್ಡ್ ಮಾಡುವುದು ಬುಲ್‌ಬುಲ್‌ಗಳಿಗೆ ಧ್ವಜವಂದನೆ ಹಾಗೂ ಗ್ರೀಟಿಂಗ್ ಕಾರ್ಡ್ ಮಾಡುವುದು. ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಧ್ವಜಸ್ತಂಭ ನಿರ್ಮಾಣ, ಸಂದೇಶ ರವಾನೆ, ಮತ್ತು ಗುಡಾರ ನಿರ್ಮಾಣ, ರೋವರ್ಸ್ ಮತ್ತು ರೇಂಜರ್ಸ್‌ಗಳಿಗೆ ಗಂಟುಗಳು (ಪ್ರವೇಶ) ಹಾಗೂ ಪ್ರಥಮ ಚಿಕಿತ್ಸೆ ಸ್ಪರ್ಧೆಗಳನ್ನು ನಡೆಸಲಾಯಿತು. ಸಾಹಸಮಯ ಕ್ರೀಡೆಗಳನ್ನು ಶ್ರೀ ಅಜಯಕುಮಾರ್ ಜೈನ್ ರವರ ನೇತೃತ್ವದಲ್ಲಿ ನಡೆಸಲಾಯಿತು.

ಸಂಜೆ ನಡೆದ ಮುಕ್ತಾಯ ಸಮಾರಂಭದಲ್ಲಿ ಡಾ. ಪಿ.ವಿ. ರತ್ನಅರಸ್ ಎ.ಎಸ್.ಸಿ(ಜಿ.) ಶ್ರೀ ಅಬ್ದುಲ್ ಜಮೀಲ್, ಡಿ.ಸಿ.(ಎಸ್), ಡಾ. ಕೆ.ಬಿ. ಗುರುಮೂರ್ತಿ ಜಿಲ್ಲಾ ಕಾರ್ಯದರ್ಶಿಗಳು ಉಪಸ್ಥಿತರಿದ್ದರು. ಹಾಗೂ ಶ್ರೀಮತಿ ಸುಜಯ ಜಿಲ್ಲಾ ಜಂಟಿ ಕಾರ್ಯದರ್ಶಿ ಶ್ರೀಮತಿ ಮಹದೇವಯ್ಯ, ಜಿಲ್ಲಾ ಸಹಕಾರ್ಯದಶಿ, ಶ್ರೀ ಅಜಯಕುಮಾರ್ ಜೈನ್ ಎ.ಡಿ.ಸಿ.(ಎಸ್.) ಶ್ರೀ ಎಂ.ಎನ. ಸುರೇಶ್ ಕುಮಾರ್ ಎ.ಡಿ.ಸಿ.(ಎಸ್.) ಶ್ರೀಮತಿ ಮನೋಹರ ಪ್ರಭ ಡಿ.ಟಿ.ಸಿ.,(ಜಿ), ಶ್ರೀ ಟಿ.ಎಸ್. ಮೋಹನಕುಮಾರ್ ಎ.ಎಲ್.ಟಿ(ಎಸ್) ರವರು ಪ್ರಶಸ್ತಿ ಪತ್ರಗಳನ್ನು ಹಾಗು ಬಹುಮಾನಗಳನ್ನು ವಿತರಣೆ ಮಾಡಿದರು. ರ್‍ಯಾಲಿಯ ಮುಖ್ಯಸ್ಥರಾಗಿ ಶ್ರೀ ಜಗದೀಶ, ಎ.ಎಲ್.ಟಿ.(ಸಿ.) ಭಾಗವಹಿಸಿದ್ದರು.

ದಿನಾಂಕ 19–02–2014 ರಂದು ಹೆಗ್ಗಡ ದೇವನಕೋಟೆ ಸ್ಥಳೀಯ ಸಂಸ್ಥೆ ರ್‍ಯಾಲಿ ಸಂತ ಮೇರಿಸ್ ಶಾಲೆಯ ಆವರಣದಲ್ಲಿ ನಡೆಯಿತು. 250 ಕಬ್ಸ್–ಬುಲ್ ಬುಲ್ಸ್, ಸ್ಕೌಟ್–ಗೈಡ್ಸ್, ಸ್ಕೌಟರ್ಸ್–ಗೈಡರ್ಸ್ ಭಾಗವಹಿಸಿದ್ದರು.

ಉದ್ಘಾಟನಾ ಸಮಾರಂಭಕ್ಕೆ ಮುಖ್ಯ ಅತಿಥಿಗಳಾಗಿ ಫಾದರ್ ರಾಯಪ್ಪ, ಶ್ರೀಕಲಿಂ ಉಲ್ಲಾ, ದೈಹಿಕ ಶಿಕ್ಷಣ ಪರಿವೀಕ್ಷಕರು, ಸಿಸ್ಟರ್ ಫಿಲೋಮಿನಾ ನೊರೋನ್ಹ ಆಗಮಿಸಿದ್ದರು. ಶ್ರೀ ರಂಗಸ್ವಾಮಿಶೆಟ್ಟಿ ಬಿ.ಆರ್.ಸಿ. ರವರು ಅಧ್ಯಕ್ಷತೆ ವಹಿಸಿದ್ದರು. ಹೆಚ್.ಡಿ. ಕೋಟೆಯ ಮುಖ್ಯ ರಸ್ತೆಯಲ್ಲಿ ಸ್ಕೌಟ್ಸ್–ಗೈಡ್ಸ್‌ಗಳಿಂದ ಪಥಸಂಚಲನೆ ನಡೆಸಲಾಯಿತು. ನಂತರ ವಿವಿಧ ಸ್ಪರ್ಧೆಗಳನ್ನು ನಡೆಸಲಾಯಿತು.

ಮಧ್ಯಾಹ್ನ ಮುಕ್ತಾಯ ಸಮಾರಂಭ ನಡೆಸಲಾಯಿತು. ಶ್ರೀ ಎಂ. ಉದಯಕುಮಾರ್, ಬಿ.ಇ.ಓ., ಡಾ. ಪಿ.ವಿ. ರತ್ನ ಅರಸ್, ಎ.ಎಸ್.ಸಿ.(ಜಿ) ಮುಖ್ಯ ಅತಿಥಿಗಳಾಗಿದ್ದರು. ಡಾ. ಕೆ.ಬಿ. ಗುರುಮೂರ್ತಿ ಜಿಲ್ಲಾ ಕಾರ್ಯದರ್ಶಿ ಅಧ್ಯಕ್ಷತೆ ವಹಿಸಿದ್ದರು. ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಈ ಸಮಾರಂಭದಲ್ಲಿ ಭಾಗವಹಿಸಿದ್ದರು.

..............ಹಿಂದಿನ ಸಂಚಿಕೆಯಿಂದ

## ಅಧ್ಯಾಯ – 3 ಕಾರ್ಯಸರಣಿ ಶಿಬಿರಾಗ್ನಿ ಉದಂತ ಸಂ – 9

## ಶಿಬಿರ ಕೌಶಲ್ಯ (CAMP CRAFT)

### ಶಿಬಿರದಲ್ಲಿ ಸೌಖ್ಯ – ಆವರಣ – ಶಿಬಿರ ಸರಂಜಾಮು – ಬೀಡುಬಿಡುವುದು ಬೆಂಕಿಯನ್ನು ಅಣಿಮಾಡುವುದು – ಶಿಬಿರವನ್ನು ಚೊಕ್ಕಟವಾಗಿಡುವುದು

### ಶಿಬಿರದ ಮಗ್ಗವನ್ನು ಮಾಡುವುದು

75. ಮೀ. ಎತ್ತರದ 5 ಬಲವಾದ ಕೋಲುಗಳನ್ನು ಸಾಲಾಗಿ (1ನೇ ಸಾಲು) ನೆಲದಲ್ಲಿ ಗಟ್ಟಿಯಾಗಿ, ನೆಡಬೇಕು. ಇದರ ಎದುರಿಗೆ 2–2.25 ಮೀ. ದೂರದಲ್ಲಿ ಮೊದಲ ಸಾಲಿಗೆ ಸಮಾನಾಂತರವಾಗಿ (ಎರಡನೆಯ ಸಾಲು) ಕನಿಷ್ಠ 2 ಕೋಲುಗಳನ್ನು ನೆಡಿರಿ (ಸಾಧ್ಯವಾದರೆ 5 ಕೋಲುಗಳನ್ನೇ ನೆಡಿರಿ) 2 ಕೋಲುಗಳನ್ನು ನೆಟ್ಟಾಗ ಅವೆರಡನ್ನೂ ಸೇರಿಸಿ ಒಂದು ಅಡ್ಡಕೋಲು ಕಟ್ಟಬೇಕು. ಈಗ ಮೊದಲ ಸಾಲಿನ ಕೋಲುಗಳಿಗೆ 2ನೆಯ ಸಾಲಿನ ಕೋಲುಗಳಿಗೂ (ಇಲ್ಲವೇ ಅಡ್ಡಕೋಲಿಗೆ) ಹಗ್ಗಗಳನ್ನು ಬಲವಾಗಿ ಬಿಗಿದು ಕಟ್ಟಿರಿ. ಈಗ ಎರಡನೆಯ ಸಾಲಿನ ಕೋಲುಗಳಿಗೆ (ಅಥವಾ ಅಡ್ಡ ಕೋಲಿಗೆ) ಮತ್ತೊಂದೊಂದು ಹಗ್ಗವನ್ನು ಕಟ್ಟಿರಿ. ಈ ಹಗ್ಗಗಳು ಮೊದಲನೆಯ ಕೋಲುಗಳನ್ನು ದಾಟಿ ಮುಂದೆ 150 ಸೆಂ. ಮೀ. ದೂರದ ಅಡ್ಡಕೋಲಿನವರೆಗೂ ಬರುತ್ತವೆ. ಅಲ್ಲಿ ಅವನ್ನು ಅಡ್ಡಕೋಲಿಗೆ ಬಿಗಿದು ಕಟ್ಟಿರಿ. ಇವೂ ಕೂಡ ಮೊದಲು ಕಟ್ಟಿದ ಹಗ್ಗಗಳಿಗೆ ಸಮಾನಾಂತರವಾಗಿ ಇರುತ್ತವೆ. ಈ ಅಡ್ಡಕೋಲನ್ನು ಒಬ್ಬ ಸ್ಕೌಟು, ಸ್ವಲ್ಪ ಕಾಲಾವಕಾಶ ಕೊಟ್ಟು ಮೇಲಕ್ಕೂ, ಕೆಳಕ್ಕೂ ಆಡಿಸುತ್ತಾನೆ. ಇನ್ನೊಬ್ಬ ಸ್ಕೌಟು, ಎಳೆದು ಕಟ್ಟಿರುವ ಸ್ಥಾಯೀ ಹಗ್ಗಗಳಿಗೂ, ಮೇಲೆ ಕೆಳಗೆ ಮಾಡುತ್ತಿರುವ ಹಗ್ಗಗೂ ಮಧ್ಯೆ, ಪದರ ಪದರವಾಗಿ ಹುಲ್ಲು, ಜರಿಗಿಡಗಳು ಇತ್ಯಾದಿ ಇಡುತ್ತಾ ಹೋಗುತ್ತಾನೆ. ಈ ರೀತಿಯಾಗಿ ಅಡ್ಡಕೋಲಿಗೆ ಕಟ್ಟಿದ ಹಗ್ಗಗಳು ಮೇಲೂ, ಕೆಳಗೂ ಆಗುವುದರಿಂದ ಹುಲ್ಲು ಇತ್ಯಾದಿ ಕಟ್ಟುಗಳು ಬಂಧಿತವಾಗುತ್ತವೆ. ಮೇಲೆ ಕೆಳಗೆ ಮಾಡುವುದರ ಜೊತೆಗೆ, ಪ್ರತಿ ಎರಡನೆಯ ಬಾರಿಯೂ, ಎಡ ಬಲ ಭಾಗಗಳಿಗೆ ಬದಲಾಯಿಸುತ್ತಾ ಹೋದರೆ ಹಗ್ಗಗಳು ತಿರುದಿದಂತಾಗಿ, ಮತ್ತಷ್ಟು ಬಲಗೊಳ್ಳುತ್ತದೆ.



ಶಿಬಿರದ ಮಗ್ಗದಲ್ಲಿ, ಹಿತಕರವಾದ ಮೆತ್ತೆಯನ್ನು ಹುಲ್ಲು, ಒಣ ಹುಲ್ಲು, ಜರಿಗಿಡಗಳು, ಇತ್ಯಾದಿಗಳಿಂದ ಸುಲಭವಾಗಿ ನೇಯಬಹುದು.



ಸಲುವಳಿ : ಸ್ಥಾಯೀ ಶಿಬಿರವೊಂದರಲ್ಲಿ ಸ್ಕೌಟುಗಳು ಸೇವಾನಿರತರಾಗಿರುವುದು

..........ಮುಂದುವರೆಯುತ್ತದೆ

# Gone Home



## Sri D. Prabhakar, ALT(S)

**Kolar District Association, Kolar Passed Away on 28th January 2014**

We record with deep regret the Sudden and untimely demise of Sri D. Prabhakar, Assistant Leader Trainer (Scouts) and Headquarters Commissioner (Training) Kolar District who passed away on Tuesday 28-01-2014 at Mulbal at the age of 51 years. He leaves behind his Wife, one Son a host of relatives and Well-wishers.He served as Physical Education Teacher at Maruthi Vidya Samsthe, Mulbagal since 1987. He was a very active Scout Master and rendered valuable Services to the Movement for more than Two Decades.

He served as Leader / Staff in a number of Training Camps of Unit Leaders at the District and State Level. He Participated in a Number of State and National Level Training Camps and Rallis. He was a very Good Yell Master, Mimicry Artist and Commentator, In this Hour of Grief and Sorrow, We the Members of the Bharat Scouts and Guides, Karnataka Join his Family members in Praying for the Departed Soul.

We Pray God Almighty to give necessary Courage and Strength to the Family Members to bear this irreparable Loss.

**May His Soul Rest in Peace.**

***- State Secretary***

ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ
Karnataka Scout & Guide News Magazine

Monthly, Published by
**The Bharat Scouts & Guides, Karnataka**
State Headquarters, Kondajji Basappa Road
Prof. P. Sivashankar Circle, Fort
Bangalore-560 002. Tel : 26701227



*Be Prepared...*
*The meaning of the motto is that a scout must prepare himself by previous thinking out and practicing how to act on any accident or emergency so that he is never taken by surprise.*

***- Lord Baden Powell***
*Founder of Scouting*



**ಸಂಚಿಕೆಯ ವಾರ್ಷಿಕ ಚಂದಾ ರೂ.100/-**
**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ**
**ವಾರ್ಷಿಕ ಚಂದಾ ರೂ. 100/-**
ಚಂದಾಹಣವನ್ನು
ರಾಜ್ಯ ಕಾರ್ಯದರ್ಶಿ ಹಾಗೂ ಸಂಪಾದಕರು
ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ಕೇಂದ್ರ ಕಛೇರಿ, ಕೊಂಡಜ್ಜಿ ಬಸಪ್ಪ ರಸ್ತೆ,
ಪ್ರೊ. ಪಿ. ಶಿವಶಂಕರ್ ವೃತ್ತ, ಕೋಟೆ,
ಬೆಂಗಳೂರು-560 002
ಇವರ ವಿಳಾಸಕ್ಕೆ ಮನಿ ಆರ್ಡರ್ (ಎಂ.ಓ)
ಮೂಲಕ ಕಳುಹಿಸಬಹುದು



30 ರಿಂದ 31 ಜನವರಿ 2014 ರವರೆಗೆ ನಡೆದ ದಾವಣಗೆರೆ ಜಿಲ್ಲೆಯ ಹರಿಹರ ತಾಲ್ಲೂಕ ಮಟ್ಟದ ರ್‍ಯಾಲಿಯಲ್ಲಿ ಭಾಗವಹಿಸಿದ ರಾಜ್ಯಮುಖ್ಯ ಆಯುಕ್ತರೊಂದಿಗೆ ಜಿಲ್ಲೆ ಹಾಗೂ ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು.



ಶ್ರೀ ಎಂ.ಬಿ. ಅಂಬಿಗೇರ, ಕ್ಷೇತ್ರ ಶಿಕ್ಷಣಾಧಿಕಾರಿ ಮತ್ತು ಎ.ಡಿ.ಸಿ(ಸ್ಕೌ), ಹಾವೇರಿ ಶ್ರೀ ಎನ್.ಐ. ಇಚ್ಚಂಗಿ ದೈಹಿಕ ಶಿಕ್ಷಣಾಧಿಕಾರಿ ಇವರಿಗೆ ಜಿಲ್ಲಾ ಸಂಸ್ಥೆ ವತಿಯಿಂದ ಸನ್ಮಾನಿಸಲಾಯಿತು. ಚಿತ್ರದಲ್ಲಿ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳನ್ನು ಕಾಣಬಹುದು.




5 ಫೆಬ್ರವರಿ 2014ರಂದು ಧಾರವಾಡ ಜಿಲ್ಲೆಯ ಹುಬ್ಬಳ್ಳಿ ಓರಿಯಂಟಲ್ ಪಬ್ಲಿಕ್ ಸ್ಕೂಲ್‌ನಲ್ಲಿ ನಡೆದ ಸ್ಕೌಟ್-ಗೈಡ್ ಮೇಳದ ಉದ್ಘಾಟನಾ ಸಮಾರಂಭದಲ್ಲಿ ಭಾಗವಹಿಸಿದ್ದ ಶ್ರೀ ಶ್ರೀನಿವಾಸ ಜೋಶಿ, ಡೆಪ್ಯುಟಿ ಕಮಿಷನರ್ ಆಫ್ ಪೋಲೀಸ್, ಶ್ರೀ ಉಮೇಶ ಬಮ್ಮಕ್ಕನವರ, ಕ್ಷೇತ್ರಶಿಕ್ಷಣಾದಿಕಾರಿಗಳು, ಶ್ರೀ ಎಂ.ಜೆ. ಅಂಗಡಿ, ದೈಹಿಕ ಶಿಕ್ಷಣಾಧಿಕಾರಿಗಳು, ಶ್ರೀ ಎಂ.ಎಂ. ಲೋಂಡೆ, ಜಿಲ್ಲಾ ಮುಖ್ಯ ಆಯುಕ್ತರು ಹಾಗೂ ಇತರರನ್ನು ಕಾಣಬಹುದು.



24 ಜನವರಿ 2014 ರಂದು ಚಿಕ್ಕಬಳ್ಳಾಪುರದ ಪಂಚಗಿರಿ ಬೋಧನಾ ಪ್ರೌಢಶಾಲೆಯಲ್ಲಿ ನೂತನ ಸ್ಕೌಟ್-ಗೈಡ್ ಘಟಕಗಳ ಉದ್ಘಾಟನಾ ಸಮಾರಂಭದಲ್ಲಿ ಶ್ರೀ ಕೆ.ವಿ. ಟ್ರಸ್ಟ್‌ನ ಅಧ್ಯಕ್ಷರಾದ ಶ್ರೀ ನವೀನ್ ಕಿರಣ್, ಶ್ರೀ ಎನ್. ಶ್ರೀನಿವಾಸನ್, ಸ್ಥಾನಿಕ ಆಯುಕ್ತರು ಹಾಗೂ ಜಿಲ್ಲಾ ಸಂಯೋಜಕರು, ಶ್ರೀ ಲಕ್ಷ್ಮಿನಾರಾಯಣ ಗುಪ್ತ, ಜಿಲ್ಲಾ ಸ್ಕೌಟ್ ಆಯುಕ್ತ, ಮುಖ್ಯ ಶಿಕ್ಷಕಿ ಶ್ರೀಮತಿ ಉಷಾ ಮಕರಂದ ಹಾಗೂ ಇತರರನ್ನು ಕಾಣಬಹುದು.




22 ಜನವರಿ 2014ರಂದು ಗದಗ ಜಿಲ್ಲೆ ಹೊಸಹಳ್ಳಿ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ನೂತನ ಸ್ಕೌಟ್ ಘಟಕಗಳ ಉದ್ಘಾಟನೆ ಹಾಗೂ ದೀಕ್ಷಾಸಮಾರಂಭದಲ್ಲಿ ಭಾಗವಹಿಸಿದ ಶ್ರೀ ಅಪ್ಪಣ್ಣ ಅ. ಇನಾಮತಿ, ಅಧ್ಯಕ್ಷರು ಗ್ರಾ.ಪಂ., ಶ್ರೀ ಪ್ರಕಾಶ್ ಗೌಡ ಪಾಟೀಲ್, ಶ್ರೀ ಎಸ್.ಆರ್. ಹೂಗಾರ, ಬಿ.ಇ.ಓ., ಗದಗ ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.



13 ಫೆಬ್ರವರಿ 2014ರಂದು ಮಧುಗಿರಿ ಶೈಕ್ಷಣಿಕ ಜಿಲ್ಲೆ ಶಿರಾದಲ್ಲಿ ನಡೆದ ತಾಲ್ಲೂಕು ಮಟ್ಟದ ಸ್ಕೌಟ್ಸ್-ಗೈಡ್ಸ್ ರ್‍ಯಾಲಿಯ ಉದ್ಘಾಟನೆಯನ್ನು ತಾಲ್ಲೂಕು ಆರೋಗ್ಯಾಧಿಕಾರಿ ಶ್ರೀ ತಿಮ್ಮರಾಜು ನೆರವೇರಿಸಿದರು. ಚಿತ್ರದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಎಸ್. ರಾಜಕುಮಾರ್, ಜಿಲ್ಲಾ ಡಯಟನ ಶ್ರೀ ಬಿ. ಸುಭಾಷ್, ಪಿ.ಇ.ಓ. ಶ್ರೀಮತಿ ಗಾಯಿತ್ರಿದೇವಿ, ಎ.ಡಿ.ಸಿ. ಶ್ರೀ ಪಾತಲಿಂಗಯ್ಯ, ಡಿ.ಟಿ.ಸಿ ಶ್ರೀ ಕೃಷ್ಣಮೂರ್ತಿ, ಕಾರ್ಯದರ್ಶಿ ಶ್ರೀ ಹೆಚ್. ಹನುಮಂತರಾಯ ಹಾಗೂ ಇತರರನ್ನು ಕಾಣಬಹುದು.

Regd. as News Paper (Magazine) RNI No : 13348/1959. Postal Regd. No KA/BGW-549/2012-2014
Permitted to Post under WPP System. Vide No.: WPP-87.
Posted at: Mail Business Centre, Bangalore GPO on 25, 28 & 30 of every month (No. of Pages : 4+24=32)



22 ಫೆಬ್ರವರಿ 2014ರಂದು ಬೆಂಗಳೂರಿನ ಶಾಂತಿಗೃಹದಲ್ಲಿ ಜರುಗಿದ
ವಿಶ್ವ ಚಿಂತನಾ ಮತ್ತು ವಿಶ್ವಭ್ರಾತುತ್ವ ದಿನಾಚರಣೆ ಸಂದರ್ಭದಲ್ಲಿ
ಭಾಗವಹಿಸಿದ ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್‌ಗಳ ವಿಹಂಗಮ ನೋಟ



ವಿಶ್ವ ಚಿಂತನಾ ಮತ್ತು ವಿಶ್ವಭ್ರಾತುತ್ವ ದಿನಾಚರಣೆ
ಅಂಗವಾಗಿ ಕಂಠೀರವ ಮುಕ್ತದಳದ ಸ್ಕೌಟ್-ಗೈಡ್‌ಗಳು
ವಿವಿಧ ಆಸ್ಪತ್ರೆಗಳಿಗೆ ಭೇಟಿನೀಡಿ ಒಳರೋಗಿಗಳಿಗೆ
ಹಣ್ಣುಗಳನ್ನು ನೀಡಿ ಹಾರೈಸಿದರು.

ಫಲ್ಸಪೋಲಿಯೋ ಅಂಗವಾಗಿ ಜಾಥಾದಲ್ಲಿ ಭಾಗವಹಿಸಿದ್ದ
ರಾಯಚೂರು ಜಿಲ್ಲೆ ಸ್ಕೌಟ್ಸ್-ಗೈಡ್ಸ್‌ಗಳು



ಸಹಾಸ ಚಟುವಟಿಕೆಯಲ್ಲಿ ಭಾಗವಹಿಸಿದ
ಮಧುಗಿರಿ ಜಿಲ್ಲೆಯ ಸ್ಕೌಟ್ಸ್-ಗೈಡ್ಸ್‌ಗಳು



ಸಮುದಾಯ ಸೇವಾ ಶಿಬಿರದಲ್ಲಿ ಪಾಲ್ಗೊಂಡ
ಬಾಗಲಕೋಟೆ ಜಿಲ್ಲೆಯ ಗೈಡ್ಸ್ ತಂಡ

7ರಿಂದ 11 ಫೆಬ್ರವರಿ 2014ರವರೆಗೆ ದಕ್ಷಿಣ ಕನ್ನಡ ಜಿಲ್ಲೆ
ಸೂಳ್ಯ ತಾಲ್ಲೂಕಿನ ಬೆಳ್ಳಾರೆಯಲ್ಲಿ ಜರುಗಿದ ರಾಜ್ಯಮಟ್ಟದ
ರೋವರ್ಸ್-ರೇಂಜರ್ಸ್ ಪ್ರಕೃತಿ ಅಧ್ಯಯನ ಶಿಬಿರದಲ್ಲಿ
ಭಾಗವಹಿಸಿದ್ದ ರೋವರ್ಸ್-ರೇಂಜರ್ಸ್‌ಗಳು



17 ರಿಂದ 18 ಜನವರಿಯಲ್ಲಿ ಉಡುಪಿ ಜಿಲ್ಲಾ ಸಂಸ್ಥೆ
ಏರ್ಪಡಿಸಿದ್ದ ಶ್ರೀ ಕೃಷ್ಣ ಮಠದ ಐತಿಹಾಸಿಕ
ಪಾರ್ಯಾಯ ಮಹೋತ್ಸವದ ಸೇವೆಯಲ್ಲಿ
ತೊಡಗಿರುವ ರೇಂಜರ್ಸ್‌ಗಳು.




ಇತ್ತೀಚೆಗೆ ಬಿಜಾಪುರದಲ್ಲಿ ನಡೆದ
ರಾಜ್ಯ ಮಟ್ಟದ ಪ್ರತಿಭಾ ಕಾರಂಜಿ ಸ್ಪರ್ಧೆಯಲ್ಲಿ
ಭಾಗವಹಿಸಿದ ಸ್ಕೌಟರ್ಸ್-ಗೈಡರ್ಸ್ ಹಾಗೂ ಇತರರನ್ನು
ಕಾಣಬಹುದು.





If not delivered, please return to :
THE EDITOR, Karnataka Scout & Guide
State Headquarters, Kondajji Basappa Road.
Prof. P. Sivashankar Circle, Fort
Bangalore - 560 002. Ph: 080-26701227
e-mail.: shq@scout.org.in

**Published by : The Bharat Scouts & Guides, Karnataka, State Headquarters, Fort, Bangalore - 560 002.**
**Publisher & Editor : M.A. Khalid. Printed by : L. Lingappa, M.D. at Sathyasri Printers Pvt. Ltd.,**
**16/1, 3rd Cross, 2nd Main, Kasturiba Nagar, Mysore Road, Bangalore - 560 026**